ಹೊಸ ಅಭ್ಯಾಸ ಪತ್ರಿಕೆಗನುಸಾರವಾಗಿ ಬರೆದುದು ಪಠ್ಯಪುಸ್ತಕವೆಂದು ಮಂಜೂರಾಗಿದೆ.

# ಭೂಮಂಡಲ ಬೋಧಿನಿ

## ಭಾಗ ೧

ಮತ್ತು ಸಾಮಾನ್ಯಜ್ಞಾನ

ಪ್ರಾಥಮಿಕ ೪ನೆಯ ಇಯತ್ತೆಗಾಗಿ

ಕೈ. ಶಿವರುದ್ರಪ್ಪ ಸೋಮಪ್ಪ ಕುಲಕರಣಿ

(ಗೌರೀಶಂ) ಶಾಲಾಗುರು

ಅವರ ಗ್ರಂಥಪ್ರಕಟನಾಲಯದಿಂದ ತಯಾರಿಸಿದುದು



ಲೇಖಕರು :

ಶ್ರೀ. ಏ. ಜಿ. ಕುಲಕರಣಿ, ಬಿ. ಎ. (ಆನರ್ಸ್), ಬಿ. ಟಿ.

ನಿವೃತ್ತ ವ್ಹಾಯಿಸ್ ಪ್ರಿನ್ಸಿಪಾಲ್, ಜಾ. ಮಿ. ಟ್ರೇನಿಂಗ್ ಕಾಲೇಜ್, ಧಾರವಾಡ

ಮತ್ತು

ಶ್ರೀ. ಎಸ್. ಎಮ್. ಮುಲಕಾಯಿ, ಬಿ. ಎಸ್ಸಿ., ಧಾರವಾಡ

ಪ್ರಕಾಶಕರು :

ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ, ಧಾರವಾಡ



೧೯೫೫ ] [ ಬೆಲೆ: ರೂ. ೦—೧೫—೦

# ಬರೆಹಗಾರರ ಎರಡು ನುಡಿ

ವಿಜ್ಞಾನದ ಪ್ರಗತಿಯಾದಂತೆಲ್ಲ ನಮಗೆ ಜಗತ್ತು ಚಿಕ್ಕದೆನಿಸತೊಡಗಿದೆ. ಆಕಾಶ ಯಾನದಿಂದ ನಾವು ನಾಲ್ಕು ದಿನಗಳಲ್ಲಿಯೆ ಒಂದು ಭೂಪ್ರದಕ್ಷಿಣೆಯನ್ನು ಪೂರ್ಣ-ಗೊಳಿಸಬಹುದು. 'ರೇಡಿಯೋ'ದ ಸಹಾಯದಿಂದ ಅರೆನಿಮಿಷದಲ್ಲಿಯೆ, ಹನ್ನೆರಡು ಸಾವಿರ ಮೈಲು ದೂರದಲ್ಲಿರುವ ನ್ಯೂಯಾರ್ಕ್ ಪಟ್ಟಣವಾಸಿಯ ಕೂಡ ನಾವು ಸಂಭಾಷಣೆಯ ಸಂಬಂಧವನ್ನು ಬೆಳೆಸಬಹುದು. ಎಂತಲೇ, ಜಗತ್ತಿನ ಯಾವುದೊಂದು ಮೂಲೆಯಲ್ಲಿ ನಡೆದ ಘಟನೆಗಳೂ ಕೂಡಲೆ ನಮ್ಮ ಮೇಲೆ ಪರಿಣಾಮವನ್ನು ಮಾಡದೆ ಇರವು. ಆದುದರಿಂದ, ಇಂದಿನ ವಿಜ್ಞಾನಯುಗದಲ್ಲಿ ಭೂಗೋಲದ ಜ್ಞಾನಕ್ಕೆ ಎಂದಿ-ಗಿಂತಲೂ ಹೆಚ್ಚಿನ ಪ್ರಾಶಸ್ತ್ಯ ಬಂದಿದೆ; ಅಲ್ಲದೆ ಭೂಗೋಲವಿಜ್ಞಾನದ ಇತಿ—ಮಿತಿ, ಪರಿಮಿತಿ ಮತ್ತು ಅದರ ಉಪಯೋಗ—ಇವುಗಳಲ್ಲಿಯೂ ಒಂದು ನಿಶ್ಚಿತತೆ, ವ್ಯಾಪಕತೆ ತೋರುತ್ತಿವೆ.

ಭಾರತವು ಸ್ವತಂತ್ರವಾದಂದಿನಿಂದ ಪ್ರತಿನಿಮಿಷಕ್ಕೂ ಪೃಥ್ವಿಯ ಮೇಲಿನ ದೂರ-ದೂರದ ದೇಶಗಳ ಸಂಗಡ ಭಾರತದ ಸಂಬಂಧವು ಬರುತ್ತಿರುವುದು. ನೆರೆಯ ರಾಷ್ಟ್ರಗಳೊಂದಿಗೆ ಭಾರತದ ನಿಕಟಸಂಬಂಧವು ಬೆಳೆಯುತ್ತಿರುವಂತೆ, ದೂರದಲ್ಲಿರುವ ಯು. ಎಸ್. ಎ., ಯು. ಎಸ್. ಎಸ್. ಆರ್., ಇಂಗ್ಲಂಡ್ ಮತ್ತು ಜಪಾನುಗಳಂತಹ ಮುಂದುವರಿದ ರಾಷ್ಟ್ರಗಳೂ ಭಾರತದ ಸಂಬಂಧವನ್ನು ಕೋರುತ್ತಿರುವುವು; ಆದುದರಿಂದ ನವಭಾರತದ ನವಾಂಕುರಗಳಂತಿರುವ ನಮ್ಮ ಮಕ್ಕಳಲ್ಲಿ ಇವೆಲ್ಲ ದೇಶಗಳ ಬಗೆಗೆ ಕೂಲಂಕಷವಾದ ಜ್ಞಾನವುಂಟಾಗುವುದು, ನಮ್ಮ ರಾಷ್ಟ್ರಹಿತದ ದೃಷ್ಟಿಯಿಂದ ಬಹಳ ಮಹತ್ತ್ವದ ಹಾಗು ಆವಶ್ಯಕ ಸಂಗತಿಯಾಗಿರುವುದು.

ಮುಂಬಯಿ ಸರಕಾರದವರು ಮಂಜೂರು ಮಾಡಿರುವ ಹೊಸ ಭೂಗೋಲ-ವಿಷಯದ ಅಭ್ಯಾಸಪತ್ರಿಕೆಯನ್ನು ನಿರೀಕ್ಷಿಸಿದರೆ, ಈ ಮೇಲಿನ ಸಂಗತಿಗಳನ್ನು ಅನುಲಕ್ಷಿಸಿಯೇ ಅದನ್ನು ರಚಿಸಲಾಗಿದೆಯೆಂಬುದು ಸುಸ್ಪಷ್ಟವಾಗುವುದು.

ಚಿಕ್ಕ ಮಕ್ಕಳಿಗೆ, ಅವರು ಮೊದಲು ಎಂದೂ ಕಾಣದ ದೇಶ, ಜನ, ಪ್ರಾಣಿಗಳು ಮೊದಲಾದುವುಗಳ ಬಗೆಗೆ ಸರಿಯಾದ ಜ್ಞಾನವನ್ನು ಮಾಡಿಕೊಡುವುದು, ಒಂದು ಕಠಿಣಪ್ರಶ್ನೆಯೇ ಎನಿಸುವುದು. ಎಲ್ಲವನ್ನು ನೋಡಿ ಇಲ್ಲವೆ ಓದಿ ತಿಳಿದುಕೊಂಡವರು, ತಮಗೆ ಗೊತ್ತಿದ್ದ ಎಲ್ಲ ವಿವರಗಳನ್ನು ಮಕ್ಕಳಿಗೆ ತಿಳಿಸಲು ಆತುರರಾಗಿರುವುದು ಸ್ವಾಭಾವಿಕ; ಇಷ್ಟೇ ಅಲ್ಲ, ಮಕ್ಕಳ ವಯೋಮರ್ಯಾದೆಯನ್ನು ಅನುಲಕ್ಷಿಸಿ ಈ ಆತುರತೆಯನ್ನು ಅಂಕಿತದಲ್ಲಿಟ್ಟುಕೊಳ್ಳುವುದೂ ಒಂದು ಕಠಿಣಪ್ರಶ್ನೆಯೇ ಆಗಿದೆ ಯೆನ್ನಬಹುದು.

ಮಕ್ಕಳ ಗ್ರಹಣಶಕ್ತಿ ಹಾಗು ಅವರಿಗೆ ಕೊಡಲಾಗುವ ಜ್ಞಾನ ಇವುಗಳಿಗೆ ತಾಳ ಮೇಳವಿಲ್ಲದಿರುವುದರಿಂದಲೇ, ಇಲ್ಲಿಯ ವರೆಗೆ ಭೂಗೋಲವೆಂದರೆ ಒಂದು ನೀರಸವಾದ, ಕ್ಲಿಷ್ಟವಾದ ವಿಷಯವೆಂಬ ಭಾವನೆ ಬೆಳೆದುಬಂದಿದೆ. ಆದರೆ ಮಕ್ಕಳಿಗೆ ತಿಳಿಯುವಂತೆ ಸುಲಭವಾದ ಭಾಷೆಯಲ್ಲಿ, ಅವರಿಗೆ ಮನೋರಂಜನೆಯಾಗುವಂತೆ ಸರಸವಾದ ಶೈಲಿಯಲ್ಲಿ, ಅವರ ವಯೋಮಾನಕ್ಕೆ ಸರಿಹೋಗುವಂತೆ ವಿಷಯವನ್ನೂ ಅದಕ್ಕೆ ತಕ್ಕಂತೆ ಸುಂದರ ನಕ್ಷೆ, ಚಿತ್ರ ಮತ್ತು ಆಕೃತಿಗಳನ್ನೂ ಪೂರಯಿಸಿ, ಭೂಗೋಲದ ವಿಷಯವನ್ನು ನಿರೂಪಿಸಿದಲ್ಲಿ, ಅದು ಓದುಗರ ಮನವನ್ನು ಪೂರ್ಣವಾಗಿ ಸೆಳೆದುಕೊಳ್ಳುವುದೆಂಬುದರಲ್ಲಿ ಸಂದೇಹವಿಲ್ಲ. ಈ ಧ್ಯೇಯವನ್ನು ಯಾವಾಗಲೂ ಕಣ್ಮುಂದೆ ಇರಿಸಿಕೊಂಡು ಪ್ರಸ್ತುತ 'ಭೂಮಂಡಲ ಬೋಧಿನಿ' ಭಾಗ ೧, ೨, ೩, ೪ ಈ ಹೊತ್ತಗೆಗಳನ್ನು ಬರೆಯಲು ಯತ್ನಿಸಿದ್ದೇವೆ. ಸಾಧ್ಯ ವಿದ್ದಮಟ್ಟಿಗೂ ಕಾರ್ಯ-ಕಾರಣ ಸಂಬಂಧಗಳನ್ನು ಎತ್ತಿತೋರಿಸಿ ಮಕ್ಕಳಲ್ಲಿ ತರ್ಕಬದ್ಧವಾದ ವಿಚಾರಶಕ್ತಿಯು ಬೆಳೆಯಲು ಸಹಾಯವಾಗುವಂತೆ ಸಾಹಸಪಟ್ಟಿರುವೆವು. ಸಂದರ್ಭಾನು ಸಾರವಾಗಿ ಪ್ರಶ್ನಪದ್ಧತಿಯನ್ನು ಬಳಸಿ ಮಕ್ಕಳಲ್ಲಿ ಜಿಜ್ಞಾಸುವೃತ್ತಿಯನ್ನೂ, ತಮ್ಮ ಪ್ರಶ್ನೆಗ ಳಿಗೆ ತಾವೇ ಉತ್ತರಗಳನ್ನು ಕಂಡುಕೊಳ್ಳುವಂತೆ ಪ್ರಯತ್ನಶೀಲ ಸ್ವಭಾವವನ್ನೂ ಬೆಳೆಸಲು ಹವಣಿಸಿರುವೆವು.

ಪುಸ್ತಕಗಳು ಎಷ್ಟು ಉತ್ಕೃಷ್ಟವಾಗಿದ್ದರೂ ಅವು ಕೇವಲ ಪೂರಕ ಸಾಧನಗಳು ಮಾತ್ರ. ಈ ಸಾಧನಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ಮಕ್ಕಳು ನಿಜವಾದ ಜ್ಞಾನವನ್ನು ಸಂಪಾದಿಸಬೇಕಾದರೆ, ಶಿಕ್ಷಕರು ಯೋಗ್ಯ ಮಾರ್ಗದರ್ಶನ ಮಾಡಬೇಕಾ ದುದು ಅತ್ಯಗತ್ಯ. ಈ ದೃಷ್ಟಿಯಿಂದ ಶಿಕ್ಷಕವೃಂದವು ಈ 'ಭೂಮಂಡಲ ಬೋಧಿನಿ'ಯ ಪುಸ್ತಕಗಳನ್ನು ಓದಿಕೊಳ್ಳಬೇಕು. ಇವುಗಳ ಬಗೆಗೆ ಅವರು ಸಲಹೆ-ಸೂಚನೆಗಳನ್ನೇನಾ ದರೂ ಕಳುಹಿದಲ್ಲಿ, ನಾವು ಅವುಗಳನ್ನು ಹೃತ್ಪೂರ್ವಕವಾಗಿ ಸ್ವಾಗತಿಸುವೆವು.

ಈ ಪುಸ್ತಕದ ಉತ್ತರಾರ್ಧವಾದ 'ಸಾಮಾನ್ಯಜ್ಞಾನ' ವಿಭಾಗದ ವಿಷಯಗಳನ್ನು ಸಂಗ್ರಹಿಸಿ ಬರೆಯುವಲ್ಲಿ ನೆರವನ್ನಿತ್ತ ಶ್ರೀ. ಕುರಡಿ ನಾರಾಯಣರಾಯರಿಗೆ ನಾವು ಕೃತಜ್ಞರಾಗಿದ್ದೇವೆ.

ಧಾರವಾಡ
ತಾ. ೧೧-೧೧-೫೪

**ಎ. ಜಿ. ಕುಲಕರಣಿ**
**ಎಸ್. ಎಮ್. ಮುಲಕಾಯಿ**

# ಪರಿವಿಡಿ

## ರೋಗಗಳೂ ಅವುಗಳನ್ನು ಪ್ರತಿಬಂಧಿಸುವ ಉಪಾಯಗಳೂ

# ಭೂಮಂಡಲ ಬೋಧಿನಿ

## ಭಾಗ ೧

## ಮುಂಬಯಿ ರಾಜ್ಯ: ಸಾಮಾನ್ಯ ವರ್ಣನೆ

ವಿದ್ಯಾರ್ಥಿಗಳೆ, ಹಿಂದಿನ ಇಯತ್ತೆಯಲ್ಲಿ ನಾವು ನಮ್ಮ ಜಿಲ್ಹೆಯ ಭೂಗೋಲದ ಅಭ್ಯಾಸವನ್ನು ಮಾಡಿದೆವು. ನಮ್ಮ ಜಿಲ್ಹೆಯಲ್ಲಿ ಯಾವ ಯಾವ ಜನರು ವಾಸಿಸುತ್ತಾರೆ; ಅವರು ಉಪಜೀವನಕ್ಕಾಗಿ ಯಾವ ಉದ್ಯೋಗಗಳನ್ನು ಮಾಡುತ್ತಾರೆ; ನಮ್ಮ ಜಿಲ್ಹೆಯಲ್ಲಿ ಯಾವ ಯಾವ ಆಹಾರಧಾನ್ಯಗಳು ಬೆಳೆಯುವವು, ಹಾಗು ಯಾವ ಯಾವ ವಸ್ತುಗಳು ತಯಾರಾಗುವವು— ಇವೆಲ್ಲವೂ ನಮಗೆ ತಿಳಿದುವು. ನಾವು ಪೇಟೆಯಲ್ಲಿ ನೋಡುವ ವಸ್ತುಗಳಲ್ಲಿಯ ಕೆಲವು ಮಾತ್ರ ನಮ್ಮ ಜಿಲ್ಹೆಯವು; ಆದರೆ ಉಳಿದ ಎಲ್ಲ ವಸ್ತುಗಳು ಬೇರೆ ಜಿಲ್ಹೆಗಳಿಂದಲೂ, ದೂರದೂರದ ನಾಡುಗಳಿಂದಲೂ ಬರುತ್ತವೆ ಎಂದು ನಾವು ಅರಿತುಕೊಂಡೆವು.

ನಾವು ಪೇಟೆಯಲ್ಲಿ ಎಷ್ಟು ಸೊಗಸಾದ ವಸ್ತುಗಳನ್ನು ನೋಡುವೆವು! ಅಷ್ಟು ಅಂದವಾದ ವಸ್ತುಗಳನ್ನು ತಯಾರಿಸುವ ಜನರು ಎಲ್ಲಿ ಎಲ್ಲಿ ವಾಸವಾಗಿದ್ದಾರೆ, ಅಲ್ಲಿಯ ಭೂಮಿ ಎಂತಹದು, ಆ ಜನರ ಮನೆ–ಮಠ, ಊಟ-ಉಡಿಗೆ, ನಡೆ–ನುಡಿ ಇವೆಲ್ಲವನ್ನು ತಿಳಿಯಬೇಕೆಂದು ನಮಗೆ ಲವಲವಿಕೆ ಉಂಟಾಗುವುದಲ್ಲವೆ ?

ನಮ್ಮ ಭಾರತದೇಶ ಬಹಳ ದೊಡ್ಡದು. ನಮ್ಮ ಜಿಲ್ಹೆಯಂತಹ ನೂರಾರು ಜಿಲ್ಹೆಗಳು ಭಾರತದಲ್ಲಿವೆ. ಅವೆಲ್ಲವುಗಳಲ್ಲಿ ವಾಸಿಸುವ ಜನರ ಬಗೆಗೆ ಒಮ್ಮೆಲೆ ತಿಳಿದುಕೊಳ್ಳಲಿಕ್ಕೆ ಆಗುವುದೆ ? ಇಲ್ಲ. ಹಾಗಾದರೆ ಮೊದಲು ನಾವು ಒಂದು ನಿಟ್ಟಿನಿಂದ ಆರಂಭಿಸೋಣ.

ಭಾರತದ ನಕಾಶವನ್ನು ನೋಡಿರಿ. ಅದರ ಪಶ್ಚಿಮದ ನಿಟ್ಟಿನಲ್ಲಿ ಸಾಧಾರಣ ಕೋಲುಪಟ್ಟಿಯಂತೆ ಉದ್ದವಾಗಿದ್ದ ತುಸುಭಾಗವನ್ನು ಕಪ್ಪು

ಬಣ್ಣದಿಂದ ಗುರುತಿಸಿದೆ. ಅದರಲ್ಲಿ ನಮ್ಮ ಜಿಲ್ಹೆಯೂ, ಅಂತಹವೇ ಬೇರೆ ಕೆಲವು ಜಿಲ್ಹೆಗಳೂ ಇರುತ್ತವೆ. ಇವೆಲ್ಲ ಜಿಲ್ಹೆಗಳಿಗೆ ಒಟ್ಟಾಗಿ ಮುಂಬಯಿ ರಾಜ್ಯ ಎನ್ನುವರು. ಹೀಗೆ ಭಾರತದಲ್ಲಿ ಬೇರೆ ಕೆಲಕೆಲವು ಜಿಲ್ಹೆಗಳನ್ನು ಗುಂಪುಗೂಡಿಸಿ, ಒಂದೊಂದು ಗುಂಪಿಗೆ ಒಂದೊಂದು ರಾಜ್ಯವೆಂದು ಕರೆದಿರಬೇಕಲ್ಲವೇ ? ನಿಜ !

ಆಕೃತಿ ೧. ಭಾರತದಲ್ಲಿ ಮುಂಬಯಿರಾಜ್ಯದ ಸ್ಥಾನ

ಭಾರತದಲ್ಲಿ ಮುಂಬಯಿರಾಜ್ಯದಂತೆ ಬೇರೆ ಕೆಲವು ರಾಜ್ಯಗಳೂ ಇವೆ. ನಾವು ಮುಂಬಯಿರಾಜ್ಯದಲ್ಲಿ ಇರುವವರು; ಆದ್ದರಿಂದ ಮುಂಬಯಿರಾಜ್ಯವನ್ನು ಕುರಿತು ಕೆಲವು ಸಂಗತಿಗಳನ್ನು ತಿಳಿದುಕೊಳ್ಳೋಣ.

## ೧. ಭಾಷೆಗಳು

ಮುಂಬಯಿ ರಾಜ್ಯದ ನಕಾಶವನ್ನು ನೋಡಿರಿ. ಅದರಲ್ಲಿ ನಮ್ಮ ಜಿಲ್ಹೆ ಎಲ್ಲಿದೆ? ಬೇರೆ ಯಾವ ಯಾವ ಜಿಲ್ಹೆಗಳು ಕಾಣುತ್ತವೆ? ಇವೆಲ್ಲವುಗಳ ಹೆಸರುಗಳನ್ನು ಹೇಳಿರಿ. ಎಷ್ಟು ಜಿಲ್ಹೆಗಳಾದುವು?

ಆಕೃತಿ ೨. ಮುಂಬಯಿ ರಾಜ್ಯ—ರಾಜಕೀಯ




ಆಕೃತಿ ೪.

ಭಾಷೆಯ ಪ್ರದೇಶಗಳ ಭೇದವನ್ನು ತೋರಿಸುವುದಕ್ಕಾಗಿ ಮುಂಬಯಿ ರಾಜ್ಯದ ಮತ್ತೊಂದು ನಕಾಶವನ್ನು ಕೊಟ್ಟಿದೆ ನೋಡಿರಿ. ದಕ್ಷಿಣಭಾಗದಲ್ಲಿ ತೋರಿಸಿದ ಸಣ್ಣ ಚುಕ್ಕಿಗಳ ಪ್ರದೇಶವು ಕನ್ನಡ ಭಾಷೆಯದು. ಈ ಭಾಗದಲ್ಲಿ ಬೆಳಗಾವಿ, ಧಾರವಾಡ, ವಿಜಾಪುರ ಮತ್ತು ಕಾರವಾರ ಈ ನಾಲ್ಕು ಜಿಲ್ಲೆಗಳು ಇರುತ್ತವೆ (ಮುಂಬಯಿರಾಜ್ಯದ ರಾಜಕೀಯ ನಕಾಶವನ್ನು ನೋಡಿರಿ). ಈ ನಾಲ್ಕೂ ಜಿಲ್ಲೆಗಳ ಪ್ರದೇಶಕ್ಕೆ 'ಮುಂಬಯಿ ಕರ್ನಾಟಕ' ಎನ್ನುವರು. ಇದನ್ನೆ ನಾವು ಸಂಕ್ಷೇಪವಾಗಿ 'ಕರ್ನಾಟಕ' ಎಂದು ಕರೆಯುತ್ತೇವೆ.

ಭಾಷೆಯ ನಕಾಶದಲ್ಲಿ ಕರ್ನಾಟಕದ ಉತ್ತರಕ್ಕಿರುವ ಕೆಲವು ಭಾಗವನ್ನು ಕಪ್ಪು ಗೆರೆಗಳಿಂದ ತೋರಿಸಲಾಗಿದೆ. ಇದು ಮುಂಬಯಿರಾಜ್ಯದಲ್ಲಿಯ ಮಹಾರಾಷ್ಟ್ರಪ್ರದೇಶವು. ಮರಾಠೀ ಭಾಷೆಯು ಹೆಚ್ಚು ಪ್ರಮಾಣದಿಂದ ಪ್ರಚಾರದಲ್ಲಿರುವ ಜಿಲ್ಲೆಗಳೆಲ್ಲ ಈ ಭಾಗದಲ್ಲಿ ಇರುವುವು. ಈ ಭಾಗವನ್ನು 'ಮಹಾರಾಷ್ಟ್ರ' ಎಂದು ಕರೆಯುವರು. (ಈ ಭಾಗದಲ್ಲಿ ಯಾವ ಯಾವ ಜಿಲ್ಲೆಗಳು ಬರುವವೆಂಬುದನ್ನು ರಾಜಕೀಯ ನಕಾಶದಲ್ಲಿ ನೋಡಿರಿ).

ಭಾಷೆಯ ನಕಾಶದ ಉತ್ತರದಲ್ಲಿ ದೊಡ್ಡ ಕಪ್ಪು ಚುಕ್ಕೆಗಳಿಂದ ಒಂದು ಭಾಗವನ್ನು ಪ್ರತ್ಯೇಕವಾಗಿ ತೋರಿಸಿದೆ. ಇದು ಗುಜರಾತ. ಗುಜರಾತಿ ಮಾತನಾಡುವ ಜನರು ಬಹು ಸಂಖ್ಯಾಕರಿರುವ ಜಿಲ್ಲೆಗಳು ಈ ಭಾಗದಲ್ಲಿ ಬರುವವು. ಅವು ಯಾವವು ? (ಮುಂಬಯಿರಾಜ್ಯದ ರಾಜಕೀಯ ನಕಾಶವನ್ನು ನೋಡಿರಿ).

ಹೀಗೆ ಜನರು ಆಡುವ ಭಾಷೆಗಳ ಮೇರೆಗೆ ಮುಂಬಯಿರಾಜ್ಯದಲ್ಲಿ ನಾವು ಕರ್ನಾಟಕ, ಮಹಾರಾಷ್ಟ್ರ ಹಾಗು ಗುಜರಾತ ಎಂದು ಮೂರು ಪ್ರದೇಶಗಳನ್ನು ಮಾಡಿದಂತಾಯಿತು. ಈ ಒಂದೊಂದು ಪ್ರದೇಶದಲ್ಲಿ ನಡೆಯುವ ಮುಖ್ಯಭಾಷೆಗೆ **ಪ್ರಾದೇಶಿಕಭಾಷೆ** ಎಂದು ಹೇಳುವರು. ಕರ್ನಾಟಕದ ಪ್ರಾದೇಶಿಕಭಾಷೆ ಕನ್ನಡ. ಹೀಗೆಂದಾಗ ಕರ್ನಾಟಕದಲ್ಲಿ ಬೇರೆ ಭಾಷೆಗಳನ್ನು ಆಡುವ ಜನರು ಇರುವದಿಲ್ಲೆಂದು ತಿಳಿಯಕೂಡದು. ಆದರೆ ಅಂತಹ ಜನರು ಸಣ್ಣಸಂಖ್ಯೆಯಲ್ಲಿ ಇರುವರೆಂದು ನಾವು ತಿಳಿಯಬೇಕು. ಇದ-ರಂತೆಯೆ ಮಹಾರಾಷ್ಟ್ರದಲ್ಲಿ ಮರಾಠಿಯನ್ನಲ್ಲದೆ ಇತರ ಭಾಷೆಗಳನ್ನು ಆಡುವ ಜನರೂ ಸ್ವಲ್ಪ ಪ್ರಮಾಣದಲ್ಲಿ ಇರುವರು. ಹಾಗೆಯೆ ಗುಜರಾತದಲ್ಲಿಯೂ ಇತರ ಭಾಷೆಗಳ ಜನರು ಸ್ವಲ್ಪ ಪ್ರಮಾಣದಲ್ಲಿ ಇರುವರು.

ಈ ಮೂರು ಪ್ರದೇಶಗಳಲ್ಲಿ ಒಟ್ಟಾಗಿ ೨೭ ಜಿಲ್ಲೆಗಳಿವೆ ಎಂದು ನೀವು ಈಗಲೆ ಎಣಿಸಿರಬಹುದು. ಈ ೨೭ ಜಿಲ್ಲೆಗಳು ಮೂರು ಬೇರೆ ಬೇರೆ ಭಾಷಾ-ಪ್ರದೇಶಗಳಲ್ಲಿ ಸೇರಿಕೊಳ್ಳುವುವೇನೋ ಸರಿಯೆ. ಆದರೆ, ನಮ್ಮ ರಾಜ್ಯದ ರಾಜಧಾನಿಯಾದ ಮುಂಬಯಿ ನಗರವು ಈ ಯಾವ ಭಾಷಾಪ್ರದೇಶದಲ್ಲಿಯೂ ಸೇರಿಕೊಳ್ಳುವುದಿಲ್ಲ. ಇದು ನಿಮಗೆ ವಿಚಿತ್ರವೆನಿಸುವುದಲ್ಲವೆ? ಹೀಗಾಗುವ-ದಕ್ಕೆ ಕಾರಣವೇನೆಂಬುದನ್ನು ನೀವು ತಿಳಿದುಕೊಳ್ಳಬೇಕಲ್ಲವೇ?

ಮುಂಬಯಿ ಬಹಳ ದೊಡ್ಡ ಪಟ್ಟಣ. ಸುಮಾರು ೨೮ ಲಕ್ಷ ಎಂದರೆ ಧಾರವಾಡ ಜಿಲ್ಲೆಯ ಎರಡು ಪಟ್ಟಿಗೂ ಮಿಕ್ಕಿದಷ್ಟು ಜನರು ಮುಂಬಯಿಯಲ್ಲಿ ವಾಸಿಸುವರು. ಮೊದಲಿನ ಮುಂಬಯಿ ನಡುಗಡ್ಡೆಗೆ ಈಗ ತುಸು ಹೆಚ್ಚಿನ ಪ್ರದೇಶವನ್ನು ಸೇರಿಸಿ ಈ ಪಟ್ಟಣದ ಸೀಮೆಯನ್ನು ವಿಸ್ತರಿಸಿರುವರು. ಎಂತಲೇ ಅದನ್ನು 'ಬೃಹನ್‌ಮುಂಬಯಿ' ಎಂದು ಕರೆಯುತ್ತಾರೆ. ಈ ನಗರದಲ್ಲಿ ಮರಾಠಿ, ಗುಜರಾತಿ ಮತ್ತು ಕನ್ನಡ ಮೂರೂ ಭಾಷೆಗಳನ್ನಾಡುವ ಜನರು ಇರುವರು; ಇಷ್ಟೇ ಅಲ್ಲದೆ, ಬೇರೆ ಹಲವಾರು ಭಾಷೆಗಳ ಜನರೂ ಅಲ್ಲಿ ವಾಸಿಸುವರು. ಆದುದರಿಂದ ಬೃಹನ್ ಮುಂಬಯಿಯ ಪ್ರಾದೇಶಿಕಭಾಷೆ ಇಂತಹದೇ ಎಂದು ಹೇಳಲಿಕ್ಕೆ ಬರುವುದಿಲ್ಲ.

ಹೀಗೆ ಕನ್ನಡ, ಮರಾಠಿ, ಗುಜರಾತಿ ಎಂದು ಮೂರು ಪ್ರಾದೇಶಿಕ ಭಾಷೆಗಳು ಹಾಗು ಉರ್ದು, ಹಿಂದಿ, ಇಂಗ್ಲಿಷ್ ಮೊದಲಾದ ಇತರ ಕೆಲವು ಭಾಷೆಗಳು ಮುಂಬಯಿ ರಾಜ್ಯದಲ್ಲಿ ಬಳಕೆಯಲ್ಲಿ ಇರುವವು.

ಮುಂಬಯಿ ನಮ್ಮ ರಾಜ್ಯ. ನಮ್ಮ ಜಿಲ್ಲೆಯ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಒಬ್ಬ ಕಲೆಕ್ಟರನು ಇರುವಂತೆ, ಇಡಿಯ ಮುಂಬಯಿರಾಜ್ಯದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಒಬ್ಬ ದೊಡ್ಡ ಅಧಿಕಾರಿ ಇರುತ್ತಾನೆ. ಅವನೇ **ರಾಜ್ಯಪಾಲ** ಅಥವಾ **ಗವ್ಹರ್ನರ್.** ಅವನ ಸಹಾಯಕ್ಕೆ ಒಬ್ಬ ಮುಖ್ಯ ಮಂತ್ರಿಯೂ, ಕೆಲವು ಜನ ಮಂತ್ರಿಗಳೂ, ಬೇರೆ ಹಲವಾರು ಜನ ಅಧಿಕಾರಿಗಳೂ ಇರುವರು. ಇವರೆಲ್ಲರನ್ನು ಒಟ್ಟಾಗಿ **'ಮುಂಬಯಿ ಸರಕಾರ'** ಎಂದು ಹೇಳು-ವರು. ಇದರಂತೆ ಬೇರೆ ರಾಜ್ಯಗಳ ಸರಕಾರಗಳಿಗೆ ಆ ಆ ರಾಜ್ಯಸರಕಾರ ಎನ್ನುವರು. ಹಾಗೆಯೆ ಇಡಿಯ ಭಾರತದೇಶಕ್ಕೂ ಒಂದು ಹಿರಿಯ ಸರಕಾರ-ವಿರುವದು. ಇದೇ **ಭಾರತ ಸರಕಾರ.**

ಮುಂಬಯಿರಾಜ್ಯದ ರಾಜ್ಯಪಾಲನು ಮುಂಬಯಿ ಪಟ್ಟಣದಲ್ಲಿ ಇರುವನು. ಮುಂಬಯಿ ಸರಕಾರದ ಮುಖ್ಯಕಚೇರಿಯೂ ಅಲ್ಲಿಯೇ ಇರುವದು. ಆದ್ದರಿಂದ ಮುಂಬಯಿ ಪಟ್ಟಣವು ನಮ್ಮ ರಾಜ್ಯದ **ರಾಜಧಾನಿಯಾಗಿದೆ.**

ಮುಂಬಯಿ ಸರಕಾರದವರು ನಮ್ಮೆಲ್ಲರ ಶಿಕ್ಷಣ, ಆರೋಗ್ಯ ಮೊದಲಾದವುಗಳ ಬಗೆಗೆ ವ್ಯವಸ್ಥೆಯನ್ನು ಇಡುವರು. ರಾಜ್ಯದಲ್ಲಿ ಕಳವು-ಹೊಡೆದಾಟಗಳು ಆಗ-ದಂತೆ, ಬರಬೀಳದಂತೆ ನೋಡಿಕೊಳ್ಳುವರು. ಕಾಯಿದೆ-ಕಟ್ಟಳೆಗಳನ್ನು ಮಾಡುವರು. ಹೀಗೆ ಸರಕಾರದವರಿಗೂ ಜನರಿಗೂ ಯಾವಾಗಲೂ ಸಂಬಂಧವು ಬರುವುದು. ಇದರಂತೆ ಮುಂಬಯಿ ಸರಕಾರದವರಿಗೂ ಭಾರತಸರಕಾರದವ-ರಿಗೂ ಮೇಲಿಂದ ಮೇಲೆ ಸಂಬಂಧವು ಬರುವುದು. ಉಳಿದ ರಾಜ್ಯಗಳ ಸಂಗಡಲೂ ಸಂಬಂಧಗಳು ಬರುವದುಂಟು. ಹಾಗಾದರೆ ಎಲ್ಲ ಸರಕಾರಗಳ ವ್ಯವಹಾರಕ್ಕೆ ಅನುಕೂಲವಾಗುವಂತೆ ಒಂದೇ ಭಾಷೆ ಇದ್ದರೆ ಒಳಿತಲ್ಲವೆ? ಅಹುದು. ಭಾರತಸರಕಾರದವರು ಇಂತಹ ಒಂದು ಭಾಷೆಯನ್ನು ಆರಿಸಿ ಗೊತ್ತುಮಾಡಿರುವರು. ಅದೇ ನಮ್ಮ **ರಾಷ್ಟ್ರಭಾಷೆ.** **ಹಿಂದಿಯು** ನಮಗೆ ರಾಷ್ಟ್ರಭಾಷೆಯಾಗಿದೆ. ಆದ್ದರಿಂದ ಮುಂಬಯಿ ರಾಜ್ಯಕ್ಕೂ ಹಿಂದಿಯೆ **ರಾಜ್ಯಭಾಷೆಯಾಗಿದೆ.** ಅದನ್ನು ನಾವು ಅವಶ್ಯ ಕಲಿಯಬೇಕು.

### ಅಭ್ಯಸನಗಳು

೧. ಮುಂಬಯಿ ಕರ್ನಾಟಕದ ಜಿಲ್ಹೆಗಳೆಷ್ಟು? ಅವು ಯಾವವು?
೨. ಮಹಾರಾಷ್ಟ್ರದ ಜಿಲ್ಹೆಗಳು ಯಾವವು?
೩. ಗುಜರಾತದ ಜಿಲ್ಹೆಗಳು ಯಾವವು?
೪. ಮುಂಬಯಿರಾಜ್ಯದಲ್ಲಿಯ ಪ್ರಾದೇಶಿಕ ಭಾಷೆಗಳಾವವು? ಅವು ಎಲ್ಲಿ ಎಲ್ಲಿ ಬಳಕೆಯಲ್ಲಿರುವವು?
೫. ಮುಂಬಯಿರಾಜ್ಯದ ದೊಡ್ಡ ಅಧಿಕಾರಿಯು ಯಾವನು?
೬. ನಮ್ಮ ರಾಷ್ಟ್ರಭಾಷೆಯು ಯಾವದು?

---

## ೨. ನಕಾಶದ ಪರಿಚಯ

ಮುಂಬಯಿ ರಾಜ್ಯದಲ್ಲಿ ಅನೇಕ ಭಾಷೆಗಳನ್ನು ಆಡುವ ಜನರು ಇರುವ-ರಲ್ಲವೆ? ಅದರಂತೆ ಅವರ ಉಡುಗೆ-ತೊಡುಗೆ, ಊಟ-ಉಪಹಾರಗಳಲ್ಲಿಯೂ ಬಹಳ ವ್ಯತ್ಯಾಸಗಳು ಕಾಣುವವು. ಒಂದೇ ರಾಜ್ಯದಲ್ಲಿ ವಾಸಿಸುವ ಜನರಲ್ಲಿ ಇಷ್ಟೇಕೆ ವ್ಯತ್ಯಾಸಗಳು ಕಾಣುವವು? ಇದನ್ನು ತಿಳಿಯಬೇಕಾದರೆ ನಾವು ಆ ಆ ಜನರು ವಾಸಿಸುವ ಪ್ರದೇಶಗಳನ್ನು ನೋಡಬೇಕು. ಅಲ್ಲಿಯ ಹವೆ ಎಂತಹದು? ಭೂಮಿ ಯಾವ ಪ್ರಕಾರದ್ದು? ಅದರಲ್ಲಿ ಯಾವ ಬೆಳೆಗಳು ಬರುವವು? ಯಾವ ಉದ್ಯೋಗ-ವ್ಯವಸಾಯಗಳನ್ನು ಮಾಡಲಿಕ್ಕೆ ಅಲ್ಲಿ ಅನುಕೂಲತೆಗಳು ಇವೆ? ಇವೆಲ್ಲ ಸಂಗತಿಗಳನ್ನು ತಿಳಿದುಕೊಳ್ಳಬೇಕು.

ಭೂಮಿಯನ್ನು ಯಾರು ನಿರ್ಮಿಸಿದರು? ಅದರಲ್ಲಿ **ತಗ್ಗು-ದಿನ್ನೆಗಳು ಹೇಗಾದುವು?** ಹೊಳೆ-ಹಳ್ಳಗಳನ್ನು ಯಾರು ಹರಿಸಿದರು? **ಸಮುದ್ರವು** ಹೇಗೆ **ಹುಟ್ಟಿತು?** ನಮಗೆ **ಬಿಸಿಲು-ಮಳೆ-ಗಾಳಿ**ಗಳನ್ನು ಯಾರು ಕೊಡುವರು? ಇವನ್ನು ಮನುಷ್ಯರಿಗೆ ಮಾಡಲಿಕ್ಕೆ ಆಗುತ್ತದೆಯೋ? ಇಲ್ಲ. ಇವೆಲ್ಲ ತನ್ನಿಂದ ತಾನೇ ಆದಂತಹವು. ಆದ್ದರಿಂದ ಇವುಗಳನ್ನು ನಾವು **ಸ್ವಾಭಾವಿಕ** (ಪ್ರಾಕೃತಿಕ) ಸಂಗತಿಗಳೆಂದು ಕರೆಯುತ್ತೇವೆ. ಯಾವುದೊಂದು ಸ್ಥಳದ ಸ್ವಾಭಾವಿಕ ಸಂಗತಿಗಳು ನಮಗೆ ಗೊತ್ತಾದರೆ, ಅಲ್ಲಿ ವಾಸಿಸುವ ಜನರ ಜೀವನವನ್ನು ತಿಳಿದುಕೊಳ್ಳಲು ಅನುಕೂಲವಾಗುವದು. ಆದರೆ, ಅವೆಲ್ಲವೂ ನಮಗೆ ತಿಳಿಯುವ ಬಗೆ ಹೇಗೆ?

**(ಅ) ಭೂ-ರಚನೆ, ಪ್ರಾಕೃತಿಕ ನಕಾಶ:** ಮುಂಬಯಿರಾಜ್ಯದ ಬಗೆಗೆ ಅಗತ್ಯವಿರುವ ಎಲ್ಲ ಸಂಗತಿಗಳನ್ನು ತಿಳಿಯಲು ನಕಾಶವು ಒಳ್ಳೆಯ ಸಾಧನವಾಗಿದೆ. ಪ್ರಾದೇಶಿಕಭಾಷೆಗಳನ್ನು ತೋರಿಸಿದ ನಕಾಶವನ್ನು ನೋಡಿದ ಕೂಡಲೆ, ಮುಂಬಯಿರಾಜ್ಯದಲ್ಲಿ ಯಾವ ಯಾವ ಭಾಷೆಗಳು ಎಲ್ಲಿ ಎಲ್ಲಿ ನಡೆಯುತ್ತವೆ ಎಂಬುದು ನಮಗೆ ಒಮ್ಮೆಲೆ ಹೊಳೆಯುತ್ತದಲ್ಲವೆ? ಹಾಗೆಯೆ ಈ ರಾಜ್ಯದಲ್ಲಿ ಭೂಮಿಯು ಎಲ್ಲಿ ತಗ್ಗಾಗಿದೆ, ಎಲ್ಲಿ ಎತ್ತರವಾಗಿದೆ, ಗುಡ್ಡ-ಪರ್ವತಗಳು ಎಲ್ಲಿ ಎಲ್ಲಿ ನೆಲಸಿ ನಿಂತಿವೆ—ಎಂಬ ಸಂಗತಿಗಳನ್ನು ನಕಾಶದಮೇಲೆ ಬೇರೆ ಬೇರೆ ಚಿನ್ಹೆಗಳಿಂದ ಗುರುತಿಸೋಣ.

**ನದಿ-ಸಮುದ್ರಗಳು:** ಪರ್ವತದ ಮೇಲೆ ಬಿದ್ದ ಮಳೆಯ ನೀರು **ಝರಿ-ಹಳ್ಳ-ಹೊಳೆ**ಯಾಗಿ **ಇಳುಕಲಿನ** ಕಡೆಗೆ ಹರಿಯುವದು; ಕಡೆಗೆ **ಸಮುದ್ರ**ವನ್ನು ಸೇರುವದು. ನೀರು ಹರಿಯುವದರ ಮೇಲಿಂದ ಭೂಮಿಯು ಯಾವ ಕಡೆಗೆ ಇಳುಕಲಾಗಿದೆಯೆಂದು ನಾವು ಒಮ್ಮೆಲೆ ಹೇಳಬಹುದು. **ಸಮುದ್ರವು ಎಲ್ಲ ಭೂಮಿಗಿಂತ ತಗ್ಗಿನಲ್ಲಿರುವದು.** ಹಾಗಾದರೆ ನಕಾಶದಲ್ಲಿ ಭೂಮಿಯ ಏರಿಳಿತಗಳನ್ನೂ, ನದಿಗಳನ್ನೂ, ಸಮುದ್ರವನ್ನೂ ಗುರುತಿಸೋಣ. (೧೧ನೆಯ ಪುಟದ ಮೇಲಿನ ಪ್ರಾಕೃತಿಕ ನಕಾಶವನ್ನು ನೋಡಿರಿ.)

**ಮಳೆಯ ನಕಾಶ:** ನೀವು ಹಿತ್ತಲಲ್ಲಿ ಬಾಳೆಯ ಗಿಡಗಳನ್ನು ಹಚ್ಚುತ್ತೀರಿ. ಅನುಕೂಲವಿದ್ದರೆ ತುಸು ಕಾಯಿಪಲ್ಯವನ್ನೂ ಬೆಳೆಯುತ್ತೀರಿ. ಬಾಳೆಯ ಗಿಡ ನೀರಲ್ಲಿ ನಿಂತರೂ ಕೊಳೆಯುವುದಿಲ್ಲ. ಕಾಯಿಪಲ್ಯದ ಬೆಳೆಗೆ ಹೆಚ್ಚು ನೀರಾದರೆ ಅದು ಕೊಳೆತು ಹೋಗುವದು. ಕಬ್ಬು ಹಾಗು ಭತ್ತದ ಬೆಳೆಗೆ ತುಸು ಹೆಚ್ಚು ಮಳೆಯಾದರೂ ಸಲ್ಲುವದು. ಅಷ್ಟು ಮಳೆಗೆ ಜೋಳ-ಸಜ್ಜೆಯ ಬೆಳೆಗಳು ಕೊಳೆಯುವವು, ಗೋದಿ-ಕಡಲೆಗಳ ಬೆಳೆಗೆ ಇನ್ನೂ ಕಡಮೆ

ಮಳೆ ಬೇಕು. ಹೀಗೆ ಮುಂಬಯಿರಾಜ್ಯದಲ್ಲಿ ಅತಿಶಯ ಮಳೆ, ತುಸು ಹೆಚ್ಚು ಮಳೆ, ಸಾಧಾರಣ ಮಳೆ, ತೀರ ಕಡಮೆ ಮಳೆ ಆಗುವ ಬೇರೆ ಬೇರೆ ಪ್ರದೇಶಗಳನ್ನು ಗುರುತಿಸಿದರೆ, ಆ ಆ ಪ್ರದೇಶಗಳಲ್ಲಿ ಎಂತಹ ಬೆಳೆಗಳು ಬರಬಹುದೆಂದು ನಾವು ಊಹೆಯಿಂದಲೆ ಹೇಳಬಹುದು. (೨೬ನೆಯ ಪುಟದ ಮೇಲಿನ ಮಳೆಯ ನಕಾಶವನ್ನು ನೋಡಿರಿ.)

**ಭೂ-ಗುಣದ ನಕಾಶ:** ಹತ್ತಿ-ಗೋದಿ-ಕಡಲೆಗಳು ಬೆಳೆಯಲಿಕ್ಕೆ ಮೇಲಾದ ಎರೆಭೂಮಿ ಒಳ್ಳೆಯದು. ಇದೇ ಭೂಮಿ ಸೇಂಗಾದ ಬೆಳೆಗೆ ಒಳಿತಲ್ಲ; ಅದಕ್ಕೆ ಮಸಾರಿಯಂತಹ ಇಲ್ಲವೆ ತುಸು ಉಸುಕುಕೂಡಿದ ಪೊಳ್ಳು ಭೂಮಿ ಬೇಕು. ಹೆಚ್ಚು ಮಳೆಯಾಗುವ ಪ್ರದೇಶದಲ್ಲಿ ಉಸುಕು ಕೂಡಿದ ಭೂಮಿಯಲ್ಲಿ ಸಹ ಭತ್ತ ಬೆಳೆಯುವದು; ಮಳೆ ಕಡಮೆಯಾದರೆ ಆ ಭೂಮಿ ಯಾತಕ್ಕೂ ಬಾರದು. ಆದ್ದರಿಂದ ಮುಂಬಯಿರಾಜ್ಯದಲ್ಲಿ ಯಾವ ಭಾಗದ ಭೂಮಿ ಎಂತಹದು ಎಂಬುದನ್ನು ನೋಡಿ ನಕಾಶದಲ್ಲಿ* ಗುರುತುಹಾಕಿದರೆ, ಆ ಆ ಭಾಗದಲ್ಲಿ ಯಾವ ಬೆಳೆಗಳನ್ನು ಬೆಳೆಯಲು ಸಾಧ್ಯವಿದೆ ಎಂದು ನಾವು ಹೇಳಬಹುದು.

ಇದೇ ಮೇರೆಗೆ ಹವೆ, ಬೆಳೆಗಳು ಮೊದಲಾದ ಸಂಗತಿಗಳ ಬಗೆಗೆ ಒಂದೊಂದು ನಕಾಶವನ್ನು ತಯಾರಿಸಬಹುದು. ಇಂಥ ನಕಾಶಗಳ ಸಹಾಯದಿಂದ ನಾವು ಯಾವದೊಂದು ಪ್ರದೇಶದಲ್ಲಿಯ ಸ್ವಾಭಾವಿಕ ಸಂಗತಿಗಳನ್ನು ತಿಳಿದುಕೊಳ್ಳಲು ಬಹಳ ಅನುಕೂಲವಾಗುವುದು. ಹಾಗಾದರೆ ಮುಂಬಯಿರಾಜ್ಯದಲ್ಲಿ ಪರ್ವತಗಳು, ಎತ್ತರ-ತಗ್ಗು ಪ್ರದೇಶಗಳು ಎಲ್ಲಿ ಎಲ್ಲಿ ಇರುತ್ತವೆ, ನದಿಗಳು ಎಲ್ಲಿ ಹರಿದಿವೆ, ಎಂಬುದನ್ನು ಮೊದಲು ತಿಳಿದುಕೊಳ್ಳೋಣ.

## ಅಭ್ಯಸನಗಳು

೧. ನದಿಯು ಹರಿಯುವುದರಮೇಲಿಂದ ನಾವು ಯಾವ ಸಾಮಾನ್ಯ ಸಂಗತಿಯನ್ನು ಕಂಡುಹಿಡಿಯುತ್ತೇವೆ ?

೨. ಪ್ರಾಕೃತಿಕ ನಕಾಶದಿಂದ ನಮಗೆ ಯಾವ ಯಾವ ಸಂಗತಿಗಳು ಗೊತ್ತಾಗುತ್ತವೆ ?

೩. ಮಳೆಯ ನಕಾಶದಿಂದ ನಮಗೆ ಯಾವ ಸಂಗತಿಗಳು ತಿಳಿಯುತ್ತವೆ ?

೪. ಭೂಗುಣದ ನಕಾಶವು ನಮಗೆ ಯಾವ ಯಾವ ಸಂಗತಿಗಳನ್ನು ತಿಳಿಸುತ್ತದೆ ?

* ಇಂತಹ ನಕಾಶವೊಂದನ್ನು ಗುರುಗಳು ಸಿದ್ಧಗೊಳಿಸಿ ತೋರಿಸಬೇಕು.

## ೩. ಮುಂಬಯಿರಾಜ್ಯ— ಪ್ರಾಕೃತಿಕ

### (ಅ) ಭೂರಚನೆ

ಮುಂಬಯಿರಾಜ್ಯದ ಒಂದು ನಕಾಶವನ್ನು ಇಲ್ಲಿ ಕೊಟ್ಟಿದೆ. ಇದರ ನಿರೀಕ್ಷಣೆಯಿಂದ ನಮಗೆ ಏನು ತಿಳಿಯುವದು ? ಮುಂಬಯಿರಾಜ್ಯದ ಪಶ್ಚಿಮ ದಂಡೆಗುಂಟ ವಿಸ್ತಾರವಾಗಿ ಪಸರಿಸಿರುವ ಸಮುದ್ರವು ಮೊದಲು ನಮ್ಮ ಮನಸ್ಸನ್ನು ಸೆಳೆಯುವದು. ಅದಕ್ಕೆ **ಅರಬೀಸಮುದ್ರ** ಎಂದು ಹೆಸರು. ಕೆರೆ, ಹೊಂಡಗಳಲ್ಲಿಯ ನೀರಿನ ಮೇಲ್ಮೈಯು **ಸಪಾಟಾಗಿ** ಕಾಣುವುದಲ್ಲವೆ ? ಅದರಂತೆ ಸಮುದ್ರದ ಮೇಲ್ಮೈಯೂ ಸಪಾಟಾಗಿರುವುದು.

ಅರಬೀಸಮುದ್ರವು ನಮಗೆ ಬಹಳ ಉಪಕಾರ ಮಾಡಿದೆ. ಸಮುದ್ರದ ನೀರಿನಿಂದ ನಮಗೆ ಉಪ್ಪು ಸಿಗುತ್ತದೆ. ಮೀನುಗಳೂ ಸಿಗುವವು. ಸಮುದ್ರದಲ್ಲಿ ನಾವೆ-ಹಡಗುಗಳಿಂದ ಪ್ರಯಾಣಮಾಡಲೂ ಅನುಕೂಲವಿರುವದು. ಇನ್ನೂ ಒಂದು ಮಹತ್ತ್ವದ ಉಪಯೋಗವೆಂದರೆ, ಅರಬೀಸಮುದ್ರವು ಭಾರತಕ್ಕೆ ಮಳೆಯನ್ನು ಕೊಡುತ್ತದೆ. ಇದು ನಿಮಗೆ ಮುಂದೆ ತಿಳಿಯುವದು.

ಅರಬೀಸಮುದ್ರದ ದಂಡೆಗುಂಟ ಕಿರಿ ಅಗಲು ಪಟ್ಟಿಯಂತಿದ್ದ ಭೂಪ್ರದೇಶವನ್ನು ಬಿಳಿಯ ಬಣ್ಣದಿಂದ ತೋರಿಸಿದೆ. ಈ ಪ್ರದೇಶವು ಸಮುದ್ರ-ಸಪಾಟಿಯಿಂದ ಅಷ್ಟು ಎತ್ತರವಾಗಿಲ್ಲ. ಆದ್ದರಿಂದ ಇದನ್ನು **ತಗ್ಗುಪ್ರದೇಶ**ವೆಂದು ಗುರುತು ಹಾಕಿ ತೋರಿಸಿದ್ದಾರೆ. ಈ ಕಿರಿಅಗಲಾದ ಪಟ್ಟಿಗೆ ಕೊಂಕಣ ಎಂದು ಹೆಸರಿದೆ. **ಕಾರವಾರ, ರತ್ನಾಗಿರಿ, ಕುಲಾಬಾ, ಠಾಣೆ** ಜಿಲ್ಹೆಗಳು ಹಾಗು **ಬೃಹನ್‌ಮುಂಬಯಿ** ಇವು ಕೊಂಕಣದಲ್ಲಿ ಬರುತ್ತವೆ.

ಕೊಂಕಣಪಟ್ಟಿಯ ಉತ್ತರಕ್ಕೂ ಸಹ ವಿಸ್ತಾರವಾದ **ತಗ್ಗಿನ ಪ್ರದೇಶ** ವಿದೆ ಎಂದು ನೀವು ಹೇಳಬಹುದು. ಅಹುದು, ಅದಕ್ಕೆ 'ಗುಜರಾತದ ಬಯಲು' ಎನ್ನುವರು. ಗುಜರಾತದ ಎಲ್ಲ ಜಿಲ್ಹೆಗಳು ಈ ಬಯಲಿನಲ್ಲಿವೆ.

ಕೊಂಕಣಪಟ್ಟಿಯ ಪೂರ್ವಕ್ಕೆ ಇರುವ **ವಿಸ್ತಾರವಾದ ಪ್ರದೇಶ**ವನ್ನು ಮಸುಕು ಚುಕ್ಕೆಗಳ ಬಣ್ಣದಿಂದ ತೋರಿಸಿದ್ದಾರೆ. ಅದು **ಎತ್ತರದ** ಅಥವಾ **ತಪ್ಪಲಿನ ಪ್ರದೇಶ**ವೆಂದು ನೀವು ಕಂಡುಹಿಡಿಯುವಿರಿ. ಇದಕ್ಕೆ **ದೇಶ**ವೆನ್ನುವರು. **ದೇಶದಲ್ಲಿ ಬೆಳಗಾವಿ, ಧಾರವಾಡ, ವಿಜಾಪುರ** ಈ ಮೂರು ಕನ್ನಡ ಜಿಲ್ಹೆಗಳೂ **ಕೊಲ್ಹಾಪುರ, ದಕ್ಷಿಣ ಸಾತಾರೆ, ಸೊಲ್ಲಾಪುರ, ಉತ್ತರ ಸಾತಾರೆ,**




ಆಕೃತಿ ೪. ಮುಂಬಯಿರಾಜ್ಯ ಪ್ರಾಕೃತಿಕ

ಪುಣೆ, ಅಹಮ್ಮದನಗರ, ನಾಸಿಕ, ಪಶ್ಚಿಮ ಖಾನದೇಶ, ಪೂರ್ವ ಖಾನದೇಶ ಮತ್ತು ಡಾಂಗ ಎಂಬ ಮರಾಠಿ ಜಿಲ್ಲೆಗಳೂ ಬರುತ್ತವೆ.

## (ಆ) ಪರ್ವತಗಳು

ತಪ್ಪಲಿನ (ದೇಶದ) ಪಶ್ಚಿಮ ನಿಟ್ಟಿನಲ್ಲಿ ಕೊಂಕಣ ಮತ್ತು **ದೇಶ** ಇವುಗಳ ನಡುವೆ, ಪರ್ವತಪ್ರದೇಶವಿದೆ ಎಂದು ಕಪ್ಪು ಬಣ್ಣದ ಗುರುತಿನಿಂದ ನೀವು ತಿಳಿದು ಕೊಳ್ಳಬಹುದು. ಈ ಪರ್ವತಮಯಪ್ರದೇಶವನ್ನು **ಮಲೆನಾಡು** (ಗುಡ್ಡಗಳ ನಾಡು) ಎಂದು ಕರೆಯುವರು. ಮಲೆನಾಡಿನ ತುಂಬ ದಟ್ಟವಾದ ಅರಣ್ಯಗಳಿಂದ ಕೂಡಿದ ಗುಡ್ಡಗಳು ಹಬ್ಬಿರುವವು. ಅವು ದಕ್ಷಿಣೋತ್ತರವಾಗಿ ನೂರಾರು ಮೈಲು ಉದ್ದವಾಗಿಯೂ, ಎತ್ತರವಾಗಿಯೂ ನಿಂತಿರುವವು. ಇವುಗಳಿಗೆ **ಸಹ್ಯಾದ್ರಿ** ಅಥವಾ **ಸಹ್ಯಪರ್ವತ**ವೆನ್ನುವರು. ಇದನ್ನೇ **ಪಶ್ಚಿಮಘಟ್ಟ**ವೆಂದೂ ಕರೆಯುವರು.

**ದೇಶ**ದ ಉತ್ತರದಲ್ಲಿ, ಪೂರ್ವ–ಪಶ್ಚಿಮವಾಗಿ ಹಬ್ಬಿದ ಇನ್ನೊಂದು ಪರ್ವತ ವಿದೆ ಎಂದು ನಿಮಗೆ ನಕಾಶದಿಂದ ತಿಳಿಯುವದು. ಅದಕ್ಕೆ **ಸಾತಪುಡಾ** ಪರ್ವತವೆನ್ನುವರು.

ಸೌರಾಷ್ಟ್ರದ ಮಧ್ಯದಲ್ಲಿಯೂ ಒಂದು ಪರ್ವತವಿದೆ. ಅದನ್ನು **ಗಿರಿನಾರ** ಪರ್ವತವೆಂದು ಕರೆಯುವರು.

ಇವೆಲ್ಲ ಪರ್ವತಗಳಿಂದ ನಮಗೆ ಏನು ಉಪಯೋಗವಿದೆ? ಇವು ನಮ್ಮ ಜೀವನಕ್ಕೆ ಹೇಗೆ ಸಂಬಂಧಪಟ್ಟಿವೆ? ಎಂಬುದನ್ನು ಆಲೋಚಿಸುವಾ. ಮುಂಬಯಿ ರಾಜ್ಯದ ಪ್ರಾಕೃತಿಕ ನಕಾಶವನ್ನು ನೋಡಿರಿ. ಉತ್ತರ ಅಂಚಿನಿಂದ ದಕ್ಷಿಣ ಅಂಚಿನವರೆಗೆ ಈ ರಾಜ್ಯದಲ್ಲಿ ೮-೧೦ ದೊಡ್ಡ ನದಿಗಳೂ ಕೆಲವು ಶಾಖಾನದಿಗಳೂ ಹರಿದಿರುವದು ಕಂಡುಬರುವದು. ಇವೆಲ್ಲ ನದಿಗಳು ಎಲ್ಲಿ ಹುಟ್ಟಿರುವವು? ಎಲ್ಲ ನದಿಗಳಿಗೆ ಪರ್ವತಗಳೇ ಉಗಮಸ್ಥಾನಗಳಾಗಿರುವವು. ನದಿಗಳ ನೀರಿನ-ಗುಂಟ ಪರ್ವತಗಳ ಮೇಲಿನ ರೇವೆಮಣ್ಣು ಹರಿದುಬರುವದು. ನದಿಗಳು ಬಯಲುಸೀಮೆಯಲ್ಲಿ ಹೊರಚೆಲ್ಲಿ ಹರಿಯುವಾಗ ಈ ರೇವೆಮಣ್ಣನ್ನು ಹರಿಬಿಡು ವವು. ಈ ಮಣ್ಣಿನಿಂದ, ನದಿಗಳ ದಂಡೆಯಲ್ಲಿ ಫಲವತ್ತಾದ ಭೂಮಿಯು ತಯಾರಾಗುವದು. ಈ ಭೂಮಿಯಲ್ಲಿ ನಾವು ಹುಲುಸಾಗಿ ಪೈರುಗಳನ್ನು ಬೆಳೆಯಬಹುದು.

ಸಹ್ಯಾದ್ರಿಯಲ್ಲಿ ವಿಪುಲವಾಗಿ ಬೆಳೆಯುವ ತೇಗು, ಮತ್ತಿ ಮುಂತಾದ ಮರಗಳ ಕಟ್ಟಿಗೆಯಿಂದ ನಾವು ಉತ್ತಮವಾದ ಮನೆಗಳನ್ನು ಕಟ್ಟಿಕೊಳ್ಳ ಬಹುದು. ಶಾಲೆಯಲ್ಲಿ ಉಪಯೋಗಿಸುವ ಖುರ್ಚಿ–ಮೇಜುಗಳು ಈ ಕಟ್ಟಿಗೆಯಿಂದಲೇ ತಯಾರಾದಂತಹವು. ಸಹ್ಯಾದ್ರಿಯ ಹಳುವುಗಳಲ್ಲಿ ಬಿದಿರು ಸಮೃದ್ಧವಾಗಿ ಬೆಳೆಯುತ್ತದೆ. ಇದರಿಂದ ನಾವು ಉತ್ತಮವಾದ ಕಾಗದ

ವನ್ನು ತಯಾರಿಸಬಹುದು. ಸಹ್ಯಾದ್ರಿಯು ನಮಗೆ ಉತ್ತಮವಾದ ಔಷಧದ ವನಸ್ಪತಿಗಳನ್ನೂ ಕೊಡುತ್ತದೆ. ನಮಗೆ ಬೇಕಾಗುವ ಉರುವಲಾದರೂ ಬೆಟ್ಟಗಳಿಂದಲೇ ಸಿಗುವುದಲ್ಲವೆ?

ಪರ್ವತಗಳಿಂದ ನಮಗೆ ಇನ್ನೊಂದು ಮಹತ್ತ್ವದ ಉಪಯೋಗವಿದೆ. ಪರ್ವತಗಳಲ್ಲಿ ಬೀಳುವ ಮಳೆಯ ನೀರನ್ನು ಒಡ್ಡುಹಾಕಿ ಸಂಗ್ರಹಿಸುತ್ತಾರೆ. ದೊಡ್ಡ ನಳಗಳ ಮುಖಾಂತರ ಈ ನೀರನ್ನು ತಗ್ಗುಪ್ರದೇಶಕ್ಕೆ ಹರಿಬಿಟ್ಟು ಅದರ ವೇಗದಿಂದ ವಿದ್ಯುಚ್ಛಕ್ತಿಯನ್ನು ಹುಟ್ಟಿಸುತ್ತಾರೆ. ಇದು ಬಹಳ ಅಗ್ಗವಾಗಿ ಸಿಗುತ್ತದೆ. ಪುಣೆ ಜಿಲ್ಹೆಯಲ್ಲಿ ಲೋಣಾವಳದ ಹತ್ತಿರ ಇದೇ ಬಗೆಯಾಗಿ



ಆಕೃತಿ ೫. ಘಟ್ಟ

ವಿದ್ಯುತ್ತನ್ನು ಹುಟ್ಟಿಸಿದ್ದಾರೆ. ಈ ವಿದ್ಯುತ್ತಿನಿಂದ **ಮುಂಬಯಿ** ಮತ್ತು **ಪುಣೆ** ಪಟ್ಟಣಗಳಿಗೆ ಬಹಳ ಉಪಯೋಗವಾಗಿದೆ. (ವಿದ್ಯುತ್ತಿನ ಉಪಯೋಗವೇನು?)

ಪರ್ವತಗಳಿಂದ ನಮಗೆ ತುಸು ಹಾನಿಯೂ ಇದೆ. **ಕೊಂಕಣ** ಮತ್ತು **ದೇಶ**ಗಳ ನಡುವೆ ಸಹ್ಯಪರ್ವತವು ಅಡ್ಡಗೋಡೆಯಂತೆ ನಿಂತಿದೆ. ಹಾಗಾದರೆ ಜನರು ಅತ್ತಿಂದ ಇತ್ತ ಹೇಗೆ ಸುಲಭವಾಗಿ ದಾಟುವರು? ಸರಕುಗಳನ್ನು ಹೇಗೆ ಸುಲಭವಾಗಿ ಸಾಗಿಸುವರು? ನಮಗೆ ಬೇಕೆನಿಸಿದ ಸ್ಥಳದಲ್ಲಿಯೆ ದಾಟಲಿಕ್ಕಂತೂ ಬರುವದೇ ಇಲ್ಲ. ಆದರೆ ಈ ಪರ್ವತದಲ್ಲಿ ೬-೮ ಸ್ಥಳಗಳಲ್ಲಿ ದೊಡ್ಡ ಸಂದುಗಳು ಇವೆ. ಅವುಗಳಿಗೆ **ಕಣಿವೆ**ಗಳೆನ್ನುವರು. ಈ ಕಣಿವೆ

ಗಳಲ್ಲಿ ಬಹಳ ವೆಚ್ಚದಿಂದ ದಾರಿಗಳನ್ನು ಮಾಡಿದ್ದಾರೆ. ಈ ದಾರಿಗಳು ಗುಡ್ಡಗಳ ಓರೆಗುಂಟ ಹಾವಿನಂತೆ ಅಂಕುಡೊಂಕಾಗಿ ಹೊರಳುತ್ತ ಹೋಗಿರುತ್ತವೆ. ಇವು **ಘಟ್ಟದ ಮಾರ್ಗಗಳು.** ಸಹ್ಯಾದ್ರಿಗೆ ನಾಸಿಕಜಿಲ್ಹೆಯಲ್ಲಿ **ಥಳಘಟ್ಟ,** ಪುಣೆ ಜಿಲ್ಹೆಯಲ್ಲಿ **ಬೋರಘಟ್ಟ,** ಬೆಳಗಾವಿಯಿಂದ ಗೋವೆಗೆ ಹೋಗುವ ಮಾರ್ಗದಲ್ಲಿ



ಆಕೃತಿ ೬. ಕಣಿವೆಯ ಮಾರ್ಗ

**ತಿನ್ಹೈಘಟ್ಟ,** ಧಾರವಾಡದಿಂದ ಕಾರವಾರಕ್ಕೆ ಹೋಗುವ ದಾರಿಯಲ್ಲಿದ್ದ **ಅರೆಬೈಲ ಘಟ್ಟ,** ಸಿರಸಿಯಿಂದ ಗೋಕರ್ಣಕ್ಕೆ ಹೋಗುವ ದಾರಿಯಲ್ಲಿ **ದೇವೀಮನೆ ಘಟ್ಟ** ಹೀಗೆ ಕೆಲವು ಘಟ್ಟದ ಮಾರ್ಗಗಳು ಇರುವವು.

ಅಂಕುಡೊಂಕಾದ ಘಟ್ಟದ ಮಾರ್ಗದಿಂದ ಚಕ್ಕಡಿ, ಮೋಟಾರುಗಳು ಓಡಾಡಬಹುದು. ಆದರೆ ಉದ್ದವಾದ ಉಗಿಬಂಡಿಯು ಹೇಗೆ ಓಡಾಡಬೇಕು? ಅದಕ್ಕೆ ತುಸು ನೀಟಾದ ದಾರಿಯು ಬೇಕು. ಅದ್ದರಿಂದ ಗುಡ್ಡವನ್ನು ಕೊರೆದು ಆರುಪಾರು ಕಿಂಡಿಮಾಡಿ, ಅದರೊಳಗಿಂದ ಹೋಗಲು ದಾರಿ

ಯನ್ನು ಮಾಡುತ್ತಾರೆ. ಇದನ್ನೆ **ಸುರಂಗಮಾರ್ಗ**ವೆಂದು ಕರೆಯುವರು. ನೀವು ಉಗಿಬಂಡಿಯಲ್ಲಿ ಕುಳಿತು ಪುಣೆಯಿಂದ ಮುಂಬಯಿಗೆ ಅಥವಾ ಲೋಂಡಾದಿಂದ ಗೋವೆಗೆ ಹೋದರೆ, ದಾರಿಯಲ್ಲಿ ಇಂಥ ಸುರಂಗಮಾರ್ಗಗಳನ್ನು ನೋಡುವಿರಿ.

---

## (ಇ) ನದಿಗಳು

ಪರ್ವತಗಳಿಂದ ನಮಗೆ ಉಪಯೋಗವಾದಂತೆ ನದಿಗಳಿಂದಲೂ ಬಹಳ ಉಪಯೋಗವಾಗಿದೆ. ಎಂತಲೇ ನಮ್ಮ ಪೂರ್ವಜರು ನದಿಗಳನ್ನು ದೇವತೆಗಳಂತೆ ಪೂಜ್ಯವೆಂದು ಭಾವಿಸಿದ್ದಾರೆ. ಅವುಗಳಿಗೆ ದೇವತೆಗಳ ಹೆಸರುಗಳನ್ನು ಕೊಟ್ಟಿದ್ದಾರೆ. ನದಿಗಳು ಬಯಲುಸೀಮೆಯಲ್ಲಿ ಹರಿಯುವಾಗ ತಮ್ಮ ದಂಡೆಗಳಲ್ಲಿ ಫಲವತ್ತಾದ ಭೂಮಿಯನ್ನು ತಯಾರಿಸುತ್ತವೆಂಬುದು ಹಿಂದೆ ನಿಮಗೆ ತಿಳಿದಿದೆ.

ವಿಜಾಪುರ, ಸೊಲ್ಲಾಪುರ, ಅಹಮ್ಮದನಗರ ಜಿಲ್ಹೆಗಳಲ್ಲಿ ಕಾಲಕಾಲಕ್ಕೆ ಮಳೆಯಾಗದ್ದರಿಂದ ಮೇಲಿಂದ ಮೇಲೆ ಬರಬೀಳುವದು. ಆಗ ಎಷ್ಟೋ ಬಡ-ಜನರು ಹೊಟ್ಟೆಗಿಲ್ಲದೆ ಕಷ್ಟಕ್ಕೀಡಾಗುವರು. ಅವರ ದನಕರುಗಳಿಗೆ ಮೇವು-ನೀರು ಇಲ್ಲದಂತಾಗುವದು. ಅವರು ಹೊಟ್ಟೆಯಪಾಡಿಗಾಗಿ ದೊಡ್ಡ ದೊಡ್ಡ ಪಟ್ಟಣಗಳಿಗೆ ಹೋಗಿ ಕೂಲಿಯ ಕೆಲಸಕ್ಕೆ ಸೇರುವರು. ಈ ಜನರ ಭೂಮಿಗಳಿಗೆ ನದಿಗಳ ಕಾಲುವೆಗಳಿಂದ ನೀರಿನ ಪೂರಯಿಕೆಯಾದರೆ ಎಷ್ಟು ಸೊಗಸಾಗುವದು! ಇದನ್ನು ಅರಿತು ಸರಕಾರದವರು ಈಗ ಎಷ್ಟೋ ನದಿಗಳಿಗೆ ಒಡ್ಡು ಹಾಕಿಸಿ ಕಾಲುವೆ-ಗಳನ್ನು ತೋಡಿಸಿರುವರು. ಗುಡ್ಡಗಳ ಮೇಲೆ ಬೀಳುವ ಮಳೆಯ ನೀರನ್ನು ಸಂಗ್ರಹಿಸಿ, ಅದರಿಂದ ವಿದ್ಯುತ್ತನ್ನು ಹೇಗೆ ಹುಟ್ಟಿಸುತ್ತಾರೆಂದು ನೀವು ಹಿಂದೆ ತಿಳಿದುಕೊಂಡಿರಿ. ಅದೇ ಮೇರೆಗೆ ನದಿಗಳಿಗೂ ಒಡ್ಡು ಹಾಕಿ ಅದರಿಂದ ವಿದ್ಯುತ್ತನ್ನು ಹುಟ್ಟಿಸಲು ಬರುವದು. ಬೆಳಗಾವಿ ಜಿಲ್ಹೆಯ ಗೋಕಾಕದ ಹತ್ತಿರ ಘಟಪ್ರಭಾ ನದಿಗೆ ಒಡ್ಡುಕಟ್ಟಿ ವಿದ್ಯುತ್ತನ್ನು ಹುಟ್ಟಿ-ಸಿದ್ದಾರೆ. ಈ ವಿದ್ಯುತ್ತಿನಿಂದ ಒಂದು ದೊಡ್ಡ ನೂಲಿನ ಗಿರಣಿಯು ನಡೆ-ದಿರುತ್ತದೆ. ಸುಮಾರು ನಾಲ್ಕುಸಾವಿರ ಜನರು ಈ ಗಿರಣಿಯಲ್ಲಿ ದುಡಿದು ಹೊಟ್ಟೆ ತುಂಬಿಕೊಳ್ಳುತ್ತಾರೆ. ಕಾರವಾರಜಿಲ್ಹೆಯಲ್ಲಿ ಜೋಗದ ಹತ್ತಿರ ಶರಾವತಿ ನದಿಯಿಂದಲೂ ಬಹಳ ದೊಡ್ಡ ಪ್ರಮಾಣದಿಂದ ವಿದ್ಯುತ್ತನ್ನು

ಹುಟ್ಟಿಸಿದ್ದಾರೆ. ಇದನ್ನು **ಮಹಾತ್ಮಾ ಗಾಂಧಿ ವಿದ್ಯುತ್‌ಕೇಂದ್ರ** ಎಂದು ಕರೆಯುವರು. ಮುಂಬಯಿ-ಮೈಸೂರು ರಾಜ್ಯಗಳಲ್ಲಿಯ ಸಾವಿರಾರು ಹಳ್ಳಿ-ಪಟ್ಟಣಗಳಿಗೆ ಇಲ್ಲಿಂದ ವಿದ್ಯುತ್ತನ್ನು ಪೂರಯಿಸುತ್ತಿರುವರು. ವಿದ್ಯುತ್ತಿನಿಂದ ನಮಗೆ ದೀಪಗಳನ್ನು ಉರಿಸಲು ಬರುವದು. ಅದರ ಶಕ್ತಿಯಿಂದ ಗಿರಣಿ-ಕಾರಖಾನೆಗಳೂ ನಡೆಯುವವು. ವಿದ್ಯುತ್ತಿನಿಂದ ಚಲಿಸುವ ರೇಲ್ವೆ-ಗಾಡಿ, ಟ್ರಾಮ್‌ಗಾಡಿಗಳೂ ಮುಂಬಯಿಯಲ್ಲಿ ಇರುವವು. ಹೀಗೆ ನದಿಗಳು ನಮಗೆ ಬಹಳ ಉಪಯುಕ್ತವಾಗಿವೆ. ಆದುದರಿಂದ ಮುಂಬಯಿರಾಜ್ಯದಲ್ಲಿ ಹರಿಯುವ ನದಿಗಳನ್ನು ಕುರಿತು ಕೆಲವು ವಿವರಗಳನ್ನು ತಿಳಿದುಕೊಳ್ಳುವಾ.

**ಸಾಬರಮತಿ** ನದಿಯು: ಮುಂಬಯಿರಾಜ್ಯದ ಪ್ರಾಕೃತಿಕ ನಕಾಶವನ್ನು ನೋಡಿರಿ. ತೀರ ಉತ್ತರದಲ್ಲಿ ಸಾಬರಮತಿ ಎಂಬ ನದಿಯು ಹರಿದಿರುವದು. ಇದು ಮುಂಬಯಿರಾಜ್ಯದ ಆಚೆಗೆ ಅರವಲೀ ಬೆಟ್ಟದಲ್ಲಿ ಉಗಮಹೊಂದಿದೆ. ಗುಜರಾತದ ಬಯಲಿನಲ್ಲಿ ಇದು ದಕ್ಷಿಣಕ್ಕೆ ಹರಿದು **ಖಂಬಾಯತ** ನಗರದ ಹತ್ತಿರ ಅರಬೀಸಮುದ್ರವನ್ನು ಕೂಡುವದು. ಈ ಪ್ರದೇಶದಲ್ಲಿ ಸಮುದ್ರವು ಭೂಮಿಯಲ್ಲಿ ಬಹಳ ದೂರದವರೆಗೆ ಒಳಸೇರಿದಂತೆ ಕಾಣುವದು; ಆದ್ದರಿಂದ ಇದನ್ನು ಖಂಬಾಯತದ **ಆಖಾತ** ಎಂದು ಹೇಳುವರು. ನೂಲು ಹಾಗು ಬಟ್ಟೆಯ ಗಿರಣಿಗಳಿಗೆ ಹೆಸರಾದ **ಅಹಮದಾಬಾದ** ಪಟ್ಟಣವು ಸಾಬರಮತಿಯ ದಂಡೆಯಲ್ಲಿ ಇರುವದು. ಮ. ಗಾಂಧಿಯವರ **ಸಾಬರಮತೀ ಆಶ್ರಮವು** ಇಲ್ಲಿಯೇ ಇರುವದು.

**ಮಹೀ** ನದಿಯು: ಗುಜರಾತದ ಪೂರ್ವಕ್ಕೆ ಇರುವ ಮಧ್ಯಭಾರತದ ತಪ್ಪಲಿನಲ್ಲಿ ಹುಟ್ಟಿ, ಗುಜರಾತದಲ್ಲಿ ನೈಋತ್ಯ ದಿಕ್ಕಿಗೆ ಹರಿದು, ಖಂಬಾಯತ ಆಖಾತದಲ್ಲಿ ಅರಬೀಸಮುದ್ರವನ್ನು ಕೂಡುವದು.

**ನರ್ಮದಾ** ನದಿಯು: ಮುಂಬಯಿರಾಜ್ಯದ ಪೂರ್ವಕ್ಕಿರುವ **ಮಧ್ಯಪ್ರದೇಶ** ರಾಜ್ಯದಲ್ಲಿ, **ಅಮರಕಂಟಕ**ವೆಂಬ ಪರ್ವತಪ್ರದೇಶದಲ್ಲಿ ಹುಟ್ಟಿದೆ. ಅಲ್ಲಿಂದ ಪಶ್ಚಿಮಕ್ಕೆ ಹರಿದು ಮುಂಬಯಿರಾಜ್ಯವನ್ನು ಸೇರುತ್ತದೆ. ದಾರಿಯಲ್ಲಿ ವಿಂಧ್ಯ ಮತ್ತು ಸಾತಪುಡಾ ಪರ್ವತಗಳ ನಡುವಿನ ಕೊಳ್ಳದಲ್ಲಿ, ಈ ನದಿಯು ರೇವೆ-ಮಣ್ಣಿನಿಂದ ಒಳ್ಳೇ ಫಲವತ್ತಾದ ಭೂಮಿಯನ್ನು ಹುಟ್ಟಿಸಿರುತ್ತದೆ. ಹೀಗೆ ಎರಡು ಗುಡ್ಡಗಳ ನಡುವೆ ಇರುವ ಅಥವಾ ಸುತ್ತಲಿನ ಪ್ರದೇಶಕ್ಕಿಂತ ಬಹಳ ತಗ್ಗಾಗಿರುವ ಪ್ರದೇಶವನ್ನು **ಕೊಳ್ಳ** ಎಂದು ಕರೆಯುವರು. ನರ್ಮದಾ**ಕೊಳ್ಳ**ದ **ಹತ್ತಿಯು** ಬಹಳ ಪ್ರಸಿದ್ಧವಾಗಿದೆ. ಈ ನದಿಯು **ಭಡೋಚ** ಪಟ್ಟಣದ ಹತ್ತಿರ ಅರಬೀ ಸಮುದ್ರವನ್ನು ಸೇರುವದು.

**ತಾಪೀ:** ಮಧ್ಯಪ್ರದೇಶದಿಂದಲೇ ಪಶ್ಚಿಮಕ್ಕೆ ಹರಿದುಬಂದು ಮುಂಬಯಿ ರಾಜ್ಯವನ್ನು ಸೇರುತ್ತದೆ. ಸಾತಪುಡಾ ಬೆಟ್ಟದ ಪೂರ್ವಭಾಗದಲ್ಲಿ **ಬೈತೂಲ** ಎಂಬ ಗ್ರಾಮದ ಹತ್ತಿರ ಈ ನದಿಯು ಉಗಮವಾಗಿದೆ. ತಾಪೀನದಿಯ ಕೊಳ್ಳದ ಭೂಮಿಯೂ **ಹತ್ತಿ** ಮತ್ತು **ಜೋಳ** ಈ ಬೆಳೆಗಳಿಗೆ ಹೆಸರಾಗಿದೆ. ಈ ನದಿಯು **ಸುರತ** ಪಟ್ಟಣದ ಹತ್ತಿರ ಅರಬೀ ಸಮುದ್ರವನ್ನು ಕೂಡುವದು.

**ಗೋದಾವರಿ:** ಇದಕ್ಕೆ ಸಹ್ಯಾದ್ರಿಯು ಉಗಮಸ್ಥಾನವಾಗಿದೆ. ಈ ನದಿಯು ನಾಸಿಕಜಿಲ್ಲೆಯ **ತ್ರ್ಯಂಬಕೇಶ್ವರ**ವೆಂಬಲ್ಲಿ ಹುಟ್ಟಿದೆ. **ಅಲ್ಲಿಂದ** ಆಗ್ನೇಯಕ್ಕೆ ಹರಿದು ಹೈದರಾಬಾದರಾಜ್ಯವನ್ನು ಸೇರುತ್ತದೆ. **ನಾಸಿಕ** ಪಟ್ಟಣವು ಇದರ ದಡದಲ್ಲಿಯೇ ಇದೆ. ಗೋದಾವರಿಯ ಕೊಳ್ಳದ ಪ್ರದೇಶವು **ಜೋಳ** ಮತ್ತು **ಸಜ್ಜೆ** ಬೆಳೆಯುವದಕ್ಕೆ ಬಹಳ ಹೆಸರಾಗಿದೆ.

**ಕೃಷ್ಣಾ** ನದಿಯು : ಇದೂ ಸಹ್ಯಾದ್ರಿಯಲ್ಲಿಯೇ ಹುಟ್ಟಿದೆ. ಸಾತಾರೆ ಜಿಲ್ಲೆಯ ಪಶ್ಚಿಮಭಾಗದಲ್ಲಿ **ಮಹಾಬಳೇಶ್ವರ** ಎಂಬ ಬಹಳ ಎತ್ತರವಾದ ಸ್ಥಳದ ಹತ್ತಿರ ಕೃಷ್ಣೆಯ ಉಗಮವಾಗಿದೆ. ಅದು ಮೊದಲು ದಕ್ಷಿಣಕ್ಕೆ ಹರಿಯುತ್ತ ದಕ್ಷಿಣಸಾತಾರೆ, ಕೊಲ್ಹಾಪುರ ಜಿಲ್ಲೆಗಳಲ್ಲಿ ಹಾಯ್ದು ಬೆಳಗಾವಿ ಜಿಲ್ಲೆಯನ್ನು ಸೇರುತ್ತದೆ. ಅಲ್ಲಿಂದ ಪೂರ್ವಮುಖವಾಗಿ ಬೆಳಗಾವಿ, ವಿಜಾಪುರ ಜಿಲ್ಲೆಗಳಲ್ಲಿ ಹರಿದು ಹೈದರಾಬಾದರಾಜ್ಯವನ್ನು ಸೇರುತ್ತದೆ. ಕೃಷ್ಣಾನದಿಯ ಕೊಳ್ಳದ ಪ್ರದೇಶವು **ಜೋಳದ** ಬೆಳೆಗೆ ಬಹಳ ಒಳ್ಳೆಯದು. ಕೃಷ್ಣಾತೀರದ ಎತ್ತುಗಳೆಂದರೆ ಶಕ್ತಿಯಲ್ಲಿ ಹೆಚ್ಚಿನವೆಂದು ನೀವು ಕೇಳಿರಬಹುದು.

**ಶರಾವತೀ** ನದಿಯು: ಸಹ್ಯಾದ್ರಿಯಲ್ಲಿಯೇ ಹುಟ್ಟಿದೆ. ಈ ನದಿಯು ಮೈಸೂರುರಾಜ್ಯದಲ್ಲಿ **ಬಿದನೂರ** ಹತ್ತಿರ ಉಗಮ ಹೊಂದಿದೆ. ಅಲ್ಲಿಂದ ಪಶ್ಚಿಮಕ್ಕೆ ಹರಿದು ಕಾರವಾರ ಜಿಲ್ಲೆಯ ಹೊನ್ನಾವರದ ಹತ್ತಿರ ಅರಬೀ-ಸಮುದ್ರವನ್ನು ಕೂಡುತ್ತದೆ. **ಗೇರುಸೊಪ್ಪೆಯ** ಅಥವಾ **ಜೋಗದ ತಡಿಸಿಲು** ಎಂದು ಜಗತ್ತಿನಲ್ಲಿಯೆ ಹೆಸರಾದ ತಡಿಸಿಲು ಈ ನದಿಯಿಂದಲೇ ಆಗಿದೆ. ಆ ಸ್ಥಳದಲ್ಲಿ ನದಿಯ ನೀರು ನಾಲ್ಕು ಶಾಖೆಗಳಾಗಿ ಒಮ್ಮೆಲೆ ೮೩೦ ಫೂಟು ಆಳವಾದ ತಗ್ಗಿನಲ್ಲಿ ಕೆಡಕೊಂಡು ಬೀಳುತ್ತದೆ. ಈ ನಾಲ್ಕು ಶಾಖೆಗಳನ್ನು **ರಾಜಾ, ಅಬ್ಬರ, ರಾಣಿ, ಬಾಣ** ಎಂದು ಕರೆಯುವರು. ಇವು ಒಂದೊಂದು ಬಗೆಯ ಸೊಬಗಿನಿಂದ ಕೆಳಗೆ ಬೀಳುವವು. ಇವು ಬೀಳುವ ರೀತಿಯಿಂದಲೇ ಇವುಗಳಿಗೆ ಈ ಹೆಸರುಗಳು ಬಂದಿವೆ. ಹೀಗೆ ನೀರು ಒಮ್ಮೆಲೆ ಕೆಡಕೊಂಡು

ಬೀಳುವದಕ್ಕೆ **ಜಲಪಾತ, ತಡಿಸಿಲು, ಧಬಧಬಿ**—ಎನ್ನುವರು. ಜೋಗದ ಈ ತಡಿಸಿಲೂ ಇದರ ಸುತ್ತುಮುತ್ತಲಿನ ನೋಟವೂ ಬಹಳ ರಮಣೀಯವಾಗಿವೆ. ಪ್ರತಿವರುಷ ಸಾವಿರಾರು ಜನರು, ಸಾಮಾನ್ಯವಾಗಿ ಡಿಶಂಬರ ತಿಂಗಳಲ್ಲಿ, ಈ ತಡಿಸಿಲನ್ನು ನೋಡಲಿಕ್ಕೆ ಬರುತ್ತಾರೆ.



ಆಕೃತಿ ೭. ಗೆರಸೊಪ್ಪೆಯ ತಡಿಸಿಲು

ಮೇಲೆ ವಿವರಿಸಿದ ಮುಖ್ಯ ನದಿಗಳಲ್ಲದೆ, ಇನ್ನೂ ಕೆಲವು ಸಣ್ಣ ನದಿಗಳು ಕೂಡ ನಮಗೆ ಉಪಯುಕ್ತವಾಗಿವೆ. ಆದ್ದರಿಂದ ಈ ನದಿಗಳ ಬಗೆಗೂ ಕೆಲವು ಸಂಗತಿಗಳನ್ನು ತಿಳಿದುಕೊಳ್ಳೋಣ.

**ಭೀಮಾನದಿಯು:** ಪುಣೆ ಜಿಲ್ಹೆಯಲ್ಲಿ, ಸಹ್ಯಾದ್ರಿಯ ಪ್ರದೇಶದಲ್ಲಿರುವ **ಭೀಮಾಶಂಕರ** ಎಂಬಲ್ಲಿ ಹುಟ್ಟಿದೆ. ಅಲ್ಲಿಂದ ಆಗ್ನೇಯ ಮುಖವಾಗಿ ಸಾತಾರೆ ಜಿಲ್ಹೆಯಲ್ಲಿ ಹರಿದು, ಸೊಲ್ಲಾಪುರ ಜಿಲ್ಹೆಯನ್ನು ಸೇರುತ್ತದೆ. ಆ ಜಿಲ್ಹೆಯಲ್ಲಿರುವ **ಪಂಢರಪುರ** ಎಂಬ ಯಾತ್ರಾಕ್ಷೇತ್ರವು ಭೀಮೆಯ ದಡ-ದಲ್ಲಿಯೇ ಇದೆ. ಅಲ್ಲಿ ವರುಷದಲ್ಲಿ ಎರಡು ಸಲ ವಿಠೋಬನ ಜಾತ್ರೆ ಕೂಡು

ತ್ತದೆ. ಲಕ್ಷಾವಧಿ ಜನರು ಜಾತ್ರೆಗೆ ಹೋಗುತ್ತಾರೆ. **ಭೀಮಾನದಿಯು** ಅಲ್ಲಿಂದ ಮುಂದೆ ವಿಜಾಪುರ ಜಿಲ್ಲೆಯ ಸೀಮೆಗುಂಟ ಹರಿದು, ಹೈದರಾಬಾದ ರಾಜ್ಯದಲ್ಲಿ ಕೃಷ್ಣೆಗೆ ಕೂಡುವದು.

**ಘಟಪ್ರಭಾ** ನದಿಯು: ಕೊಲ್ಹಾಪುರ ಜಿಲ್ಲೆಯ **ರಾಮಘಾಟ** ಎಂಬಲ್ಲಿ ಹುಟ್ಟಿ, ಪೂರ್ವಕ್ಕೆ ಬೆಳಗಾವಿ, ವಿಜಾಪುರ ಜಿಲ್ಲೆಗಳಲ್ಲಿ ಹರಿದಿದೆ. ಈ ನದಿಗೆ



ಆಕೃತಿ ೮. ಗೋಕಾಕದ ತಡಿಸಿಲು

ಗೋಕಾಕದ ಹತ್ತಿರ ಒಂದು ತಡಿಸಿಲು ಉಂಟಾಗಿದೆ. ಅಲ್ಲಿ ಈ ನದಿಯ ನೀರು ೧೭೮ ಫೂಟು ಆಳವಾದ ಕಂದರದಲ್ಲಿ ಬೀಳುತ್ತದೆ. ಇಲ್ಲಿಯೇ ವಿದ್ಯುತ್ತನ್ನು ಹುಟ್ಟಿಸಿರುವರು. ಇಲ್ಲಿಂದ ಪಶ್ಚಿಮಕ್ಕೆ ಧೂಪದಾಳದ ಹತ್ತಿರ ಈ ನದಿಗೆ ಒಡ್ಡು ಕಟ್ಟಿ ಕಾಲುವೆಯಿಂದ ಭೂಮಿಗೆ ನೀರನ್ನು ಪೂರಯಿಸಿರುವರು. ವಿಜಾಪುರ ಜಿಲ್ಲೆಯ **ಬಾಗಿಲುಕೋಟೆ** ತಾಲೂಕಿನಲ್ಲಿ ಈ ನದಿಯು ಕೃಷ್ಣೆಗೆ ಕೂಡುತ್ತದೆ.

**ಮಲಪ್ರಭಾ ನದಿಯು:** ಬೆಳಗಾವಿ ಜಿಲ್ಲೆಯ ಪಶ್ಚಿಮಭಾಗದಲ್ಲಿ **ಕಣಕುಂಬಿ** ಗ್ರಾಮದ ಹತ್ತಿರಹುಟ್ಟಿ ಪೂರ್ವಕ್ಕೆ ಹರಿದಿದೆ. ಇದು ವಿಜಾಪುರ ಜಿಲ್ಲೆಯಲ್ಲಿ **ಕಪ್ಪಡಿಸಂಗಮದ** ಹತ್ತಿರ ಕೃಷ್ಣೆಗೆ ಕೂಡುತ್ತದೆ. ಇಲ್ಲಿಯೇ **ಸಂಗಮೇಶ್ವರ** ದೇವಾಲಯವಿದೆ. ಇಲ್ಲಿ ಪ್ರತಿವರುಷ ದೊಡ್ಡ ಜಾತ್ರೆ ಕೂಡುತ್ತದೆ.

**ತುಂಗಭದ್ರಾ** ನದಿಯು: ತುಂಗಾ ಮತ್ತು ಭದ್ರಾ ಎಂಬ ಎರಡು ಚಿಕ್ಕ ನದಿಗಳು ಕೂಡಿ ಆದುದು. ಅವೆರಡೂ ನದಿಗಳು ಮೈಸೂರು ರಾಜ್ಯದಲ್ಲಿಯೆ ಹುಟ್ಟಿವೆ. ತುಂಗಭದ್ರಾ ನದಿಯು ಧಾರವಾಡ ಜಿಲ್ಹೆಯ ಪೂರ್ವದ ಅಂಚಿನ ಗುಂಟ ಹರಿದು, ಮುಂದೆ ಹೈದರಾಬಾದರಾಜ್ಯದಲ್ಲಿ ಕೃಷ್ಣೆಗೆ ಕೂಡುತ್ತದೆ.

ಕೊಂಕಣದಲ್ಲಿಯೂ ಕೆಲವು ಸಣ್ಣ ನದಿಗಳು ಹರಿದಿವೆ. ಆದರೆ ಅವು-ಗಳಿಂದ ನಮಗೆ ತಕ್ಕಷ್ಟು ಉಪಯೋಗವಾಗಿಲ್ಲ.

## ಅಭ್ಯಸನಗಳು

೧. ಮುಂಬಯಿರಾಜ್ಯದಲ್ಲಿಯ ಪರ್ವತಗಳು ಯಾವವು ?
೨. ಪರ್ವತಗಳಿಂದ ನಮಗೆ ಏನು ಉಪಯೋಗವಿದೆ ?
೩. ಸಹ್ಯಪರ್ವತದಲ್ಲಿಯ ಘಟ್ಟದ ಮಾರ್ಗಗಳು ಯಾವವು ಮತ್ತು ಅವುಗಳ ಉಪಯೋಗವೇನು ?
೪. ನದಿಗಳಿಗೆ ಅಣೆಕಟ್ಟನ್ನು ಏಕೆ ಕಟ್ಟುವರು ? ನಮ್ಮ ರಾಜ್ಯದಲ್ಲಿ ಯಾವ ನದಿಗಳಿಗೆ ಅಣೆಕಟ್ಟನ್ನು ಕಟ್ಟಿರುವರು ?
೫. ನಮ್ಮ ರಾಜ್ಯದಲ್ಲಿ ಯಾವ ನದಿಗಳಿಂದ ಜಲವಿದ್ಯುತ್ತನ್ನು ಹುಟ್ಟಿಸಿರುವರು ?

---

## ೪. ಹವೆ

ಮಳೆಯಾದಾಗ ಹೊಳೆ–ಹಳ್ಳಗಳು ತುಂಬಿ ಹರಿಯುವವು. ಮಳೆ ಎಲ್ಲಿಂದ ಬರುತ್ತದೆ? ಆಕಾಶದಲ್ಲಿ ತೇಲಿಬರುವ ಮೋಡಗಳಿಂದಲ್ಲವೆ? ಅಹುದು. ಆದರೆ ನಿತ್ಯವೂ ಆಕಾಶದಲ್ಲಿ ಮೋಡಗಳು ಇರುವವು; ಆದರೂ ನಿತ್ಯವೂ ಮಳೆ-ಯಾಗುವದಿಲ್ಲ. ಹಾಗಾದರೆ ಮೋಡಗಳು ಯಾವಾಗ ಮತ್ತು ಹೇಗೆ ಮಳೆಗರೆ-ಯುತ್ತವೆ ಎಂಬುದನ್ನು ತಿಳಿದುಕೊಳ್ಳಬೇಕಾದರೆ, ನಾವು ಮೊದಲು ಹವೆಯ ಬಗೆಗೆ ಕೆಲವು ಸಂಗತಿಗಳನ್ನು ಕಲಿತುಕೊಳ್ಳಬೇಕು.

ಹವೆಯು ನಮ್ಮ ಸುತ್ತುಮುತ್ತಲು ಎಲ್ಲೆಲ್ಲಿಯೂ ತುಂಬಿಕೊಂಡಿರುವದು. ಅದು ನಮ್ಮ ಕಣ್ಣಿಗೆ ಕಾಣಿಸಲಾರದು. ಆದರೂ ಪ್ರತಿಯೊಂದು ಕ್ಷಣಕ್ಕೂ ನಮಗೆ ಹವೆಯು ಬೇಕಾಗುವದು. ಹವೆ ಇಲ್ಲದಿದ್ದರೆ ಪ್ರಾಣಿಗಳ ಶ್ವಾಸಕ್ರಿಯೆಯೇ ನಿಂತುಹೋಗುವದು. ಹವೆ ಇಲ್ಲದಿದ್ದರೆ ಯಾವ ಪ್ರಾಣಿಯೂ ಬದುಕಲಾರದು. ನಮ್ಮ ಶರೀರಕ್ಕೆ ಉಷ್ಣತೆ ಸಿಗುವದು ಹವೆಯಿಂದಲೇ.

ಸೂರ್ಯನ ಬಿಸಿಲಿನಿಂದ ಭೂಮಿಯು ಕಾಯುವದು. ಈ ಕಾವು (ಉಷ್ಣತೆ) ಭೂಮಿಗೆ ಹೊಂದಿ ಇದ್ದ ಹವೆಯಲ್ಲಿ ಮೊದಲು ಸೇರಿಕೊಳ್ಳು

ವದು. ಮುಂದೆ ಸಾವಕಾಶವಾಗಿ ಈ ಉಷ್ಣತೆಯು ಮೇಲ್ಪಟ್ಟದ ಹವೆಗೂ ಪಸರಿಸುವದು; ಆದರೆ ಭೂಮಿಯಿಂದ ಮೇಲಕ್ಕೆ ದೂರ ದೂರ ಹೋದಂತೆ ಈ ಉಷ್ಣತೆಯ ಪ್ರಮಾಣವು ಕಡಮೆಯಾಗುವದು. ಉದಾ:— ಬೆಂಕಿಯ ಹತ್ತಿರ ಕುಳಿತರೆ ನಿಮಗೆ ಬಹಳ ಝಳ ತಾಗುವದು. ಬೆಂಕಿಯಿಂದ ದೂರ ದೂರ ಸರಿದಂತೆ ನಿಮಗೆ ಕಡಿಮೆ ಝಳ ತಾಗುವದು. ಈ ಕಾರಣದಿಂದ, ಭೂಮಿಗೆ ಹೊಂದಿ ಇದ್ದ ಹವೆಯಷ್ಟು ಆಕಾಶದಲ್ಲಿಯ ಹವೆಯು ಎಂದೂ ಕಾಯುವದಿಲ್ಲ. ಇದೇ ಕಾರಣದಿಂದ, **ಪರ್ವತದ ಅಡಿಯಲ್ಲಿ ಇರುವಷ್ಟು ಸೆಕೆಯು ಪರ್ವತದ ತುದಿಯಲ್ಲಿರುವದಿಲ್ಲ; ಸಮುದ್ರಸಪಾಟಿಯಲ್ಲಿ ಇರುವಷ್ಟು ಉಷ್ಣತೆಯು ತಪ್ಪಲುಪ್ರದೇಶದಲ್ಲಿ ಇರುವದಿಲ್ಲ.**

ಇನ್ನು ಎಲ್ಲಿ ಎಷ್ಟು ಉಷ್ಣತೆ ಇರುತ್ತದೆ ಎಂಬುದನ್ನು ಹೇಗೆ ಹೇಳುವದು? ಉಷ್ಣತೆಯನ್ನು ಅಳೆಯಲು ಒಂದು ಉಪಕರಣವಿರುತ್ತದೆ. ಅದನ್ನು **ಉಷ್ಣತಾಮಾಪಕ** ಎನ್ನುವರು. ಉಷ್ಣತೆಯನ್ನು ಅಂಶ (ಡಿಗ್ರಿ) ಗಳಲ್ಲಿ ಹೇಳುತ್ತಾರೆ. ಉದಾ:— ಚಳಿಯಿಂದ ನೀರು ಹೆಪ್ಪುಗಟ್ಟುವಾಗಿನ ಉಷ್ಣತಾಂಶ ೩೨ ಅಂಶ ಫ್ಯಾರನಾಯಿಟ್ (೩೨° ಫ್ಯಾ.) ಮತ್ತು ನೀರು ಕಾಯ್ದು ಉಗಿಯಾಗುವಾಗಿನ ಉಷ್ಣತಾಂಶ ೨೧೨ ಅಂಶ ಫ್ಯಾರನಾಯಿಟ್ (೨೧೨° ಫ್ಯಾ.) ಮುಂತಾಗಿ. ಅದರಂತೆ **ನೆರಳಲ್ಲಿ** ತೂಗುಹಾಕಿದ ಉಷ್ಣತಾಮಾಪಕವು ತೋರಿಸುವ ಉಷ್ಣತಾಂಶವು ಆ ಆ ಸಮಯದಲ್ಲಿಯ ಹವೆಯಲ್ಲಿಯ ಉಷ್ಣತೆಯನ್ನು ಸೂಚಿಸುವದು.

ಹವೆಯು ಚಲಿಸತೊಡಗಿದರೆ ಅದನ್ನೇ ನಾವು 'ಗಾಳಿ' ಎಂದು ಕರೆಯು-ವೆವು. ಗಾಳಿಯು ಭರದಿಂದ ಬೀಸಲಾರಂಭಿಸಿದರೆ ಅದೇ **ಬಿರುಗಾಳಿ** ಎನಿಸುವದು. (ಗಾಳಿಗಳು ಹೇಗೆ ಹುಟ್ಟುತ್ತವೆ ಎಂಬುದನ್ನು ನೀವು ಮುಂದೆ ಕಲಿಯುವಿರಿ.) ಜೇಷ್ಠಮಾಸ (ಜೂನ ತಿಂಗಳು ಆರಂಭ-ವಾಗುತ್ತಲೇ, ನಮ್ಮಲ್ಲಿ ನೈಋತ್ಯ ದಿಕ್ಕಿನಿಂದ ಈಶಾನ್ಯ ದಿಕ್ಕಿನ ಕಡೆಗೆ ಗಾಳಿಗಳು ಬೀಸಲಾರಂಭಿಸುವವು. ಈ ಗಾಳಿಗಳಿಗೆ **ನೈಋತ್ಯ ಮಾನ್ಸೂನ್ ಗಾಳಿ**ಗಳೆಂದು ಹೆಸರು. ಇದೇ ನಮಗೆ ಮಳೆಗಾಲದ ಪ್ರಾರಂಭ. ಆಗ ಹವೆಯು ತಂಪಾಗಿರುವದು. ಅದರಿಂದ ನಮಗೆ ಚಳಿಯೆನಿಸಿ ಮೈಮೇಲೆ ಹೆಚ್ಚು ಬಟ್ಟೆಗಳು ಬೇಕಾಗುವವು. ಅಲ್ಲಿಂದ ಮುಂದೆ ನಾಲ್ಕು ತಿಂಗಳು ಈ ಬಗೆಯ ಹವೆಯು ಇರುವದು. ಕಾರ್ತಿಕಮಾಸ (ಅಕ್ಟೋಬರ್ ತಿಂಗಳು) ಆರಂಭ-ವಾಗುತ್ತಲೆ, ಗಾಳಿಗಳು ವಿರುದ್ಧ ದಿಕ್ಕಿನಿಂದ ಎಂದರೆ ಈಶಾನ್ಯ ದಿಕ್ಕಿನಿಂದ ನೈಋತ್ಯ ದಿಕ್ಕಿನ ಕಡೆಗೆ ಬೀಸಹತ್ತುವವು. ಈ ಗಾಳಿಗಳಿಗೆ **ಈಶಾನ್ಯ-**

**ಮನ್ಸೂನ್** ಗಾಳಿಗಳೆನ್ನುವರು. ಆಗ ನಮ್ಮಲ್ಲಿ ಮಳೆಗಾಲವು ಮುಗಿದು ಚಳಿ-ಗಾಲವು ಪ್ರಾರಂಭವಾಗುವದು. ಚಳಿಗಾಲವೂ ನಾಲ್ಕು ತಿಂಗಳ ಅವಧಿಯದು. ಈ ಕಾಲದಲ್ಲಿ ಹವೆಯು ಬಹಳ ಶೀತವಾಗಿದ್ದು ನಮಗೆ ತುಂಬ ನಡುಕವನ್ನು ಹುಟ್ಟಿಸುವದು.

ಹಾಗಾದರೆ ಮಳೆಗಾಲದ ತಂಪುಹವೆಯಲ್ಲಿಯೂ ಚಳಿಗಾಲದ **ಶೀತಹವೆ**ಯಲ್ಲಿಯೂ ಏನು ವ್ಯತ್ಯಾಸವಿದೆ? ಹೇಳಿರಿ: (೧) ಮಳೆಗಾಲದಲ್ಲಿ ಮನೆಯಲ್ಲಿ ಒಣಗಲು ಹಾಕಿದ ಬಟ್ಟೆಗಳು ಎರಡೆರಡು ದಿನಗಳ ವರೆಗೆ ಒಣಗುವದಿಲ್ಲ; ಆಗ ಹವೆಯು ಎಷ್ಟು ತಂಪಾಗಿದ್ದರೂ ನಮ್ಮ ಕೈಕಾಲುಗಳು ಬಿರಿಯದೆ ಮೆತ್ತಗಾಗಿ-ರುವವು. (೨) ಚಳಿಗಾಲದಲ್ಲಿ ಕೆಲವೇ ತಾಸುಗಳಲ್ಲಿ ಬಟ್ಟೆಗಳು ಪೂರ್ತಿಯಾಗಿ ಒಣಗುವವು; ನಮ್ಮ ಕೈಕಾಲುಗಳು ಈ ಕಾಲದಲ್ಲಿ ಬಿರಿತು ಸೀಳಿಹೋಗುವವು. ಹೀಗಾಗಲಿಕ್ಕೆ ಏನು ಕಾರಣ, ಬಲ್ಲಿರಾ? ನೈಋತ್ಯ ಮನ್ಸೂನ್ ಗಾಳಿಯಲ್ಲಿ ನೀರಿನ (ಉಗಿಯ ರೂಪದಲ್ಲಿ) ಪ್ರಮಾಣವು ಹೆಚ್ಚಾಗಿರುತ್ತದೆ. ಹೆಚ್ಚು ಉಗಿಯು ಕೂಡಿದ ಹವೆಗೆ **ಆರ್ದ್ರಹವೆ** ಎನ್ನುವರು. ಈಶಾನ್ಯ ಮನ್ಸೂನ್ ಗಾಳಿಯಲ್ಲಿ ಉಗಿಯ ಪ್ರಮಾಣವು ತೀರ ಕಡಮೆ ಇರುತ್ತದೆ. ಇದನ್ನೇ **ಒಣಹವೆ** ಎಂದು ಹೇಳುವರು.

ಆರ್ದ್ರಹವೆಯಿಂದ ನಮ್ಮ ಮೈ ಮೆತ್ತಗಾಗುತ್ತದೆ. ಹವೆಯು ಬಹಳ ಆರ್ದ್ರವಾಗಿದ್ದರೆ ಶ್ರಮವಿಲ್ಲದೆ ಮೈ ಬೆವರುವದು. ಆಗ ಮೈಮೇಲಿ ಬಟ್ಟೆಗಳು ಬೇಡವೆನಿಸುವವು. ಮೈಯಲ್ಲಿ ಆಲಸ್ಯ ಬರುವದು. ದುಡಿಯಲು ಉತ್ಸಾಹ-ವಿರುವದಿಲ್ಲ. ನಮ್ಮ ಶರೀರಕ್ಕೆ ಇಂತಹ ಹವೆಯು ಅಷ್ಟು ಒಳಿತಲ್ಲ. ಸಮುದ್ರದ ದಂಡೆಯ ಹವೆಯು ಬಹಳ ಆರ್ದ್ರವಾಗಿರುತ್ತದೆ. ಆದ್ದರಿಂದ ಕೊಂಕಣದಲ್ಲಿ ವಾಸಿಸುವ ಜನರ ಮೇಲೆ ಈ ಹವೆಯು ಹೇಗೆ ಪರಿಣಾಮಮಾಡಿದೆ—ಎಂಬು ದನ್ನು ನೀವು ಮುಂದೆ ಕಲಿಯುವಿರಿ.

ಒಣ ಹವೆಯು ಹಿತಕರವಾದುದು. ಇಂಥ ಹವೆಯಲ್ಲಿ ದುಡಿಯಲಿಕ್ಕೆ ಉತ್ಸಾಹ ಬರುತ್ತದೆ. ಹೆಚ್ಚಾಗಿ ಮೈ ಬೆವರುವದಿಲ್ಲ. ಆಹಾರವೂ ಹೆಚ್ಚಿಗೆ ಬೇಕೆನಿಸುವದು. ಶರೀರವು ಗಟ್ಟಿಮುಟ್ಟಾಗಿರುವದು. ಇಂತಹ **ಒಣಹವೆಯು ದೇಶದಲ್ಲಿ** ಹಾಗೂ **ಗುಜರಾತದ ಬಯಲಿನಲ್ಲಿ** ಇರುವದು.

ಮಲೆನಾಡಿನಲ್ಲಿ ಬಹಳ ಮಳೆಯಾಗುವದೆಂದು ನಿಮಗೆ ಮುಂದೆ ತಿಳಿ ಯುವದು. ಅಲ್ಲಿ ಗಿಡ–ಗಂಟೆಗಳು ವಿಪುಲವಾಗಿ ಬೆಳೆಯುತ್ತವೆ. ಮಳೆ ಗಾಲದಲ್ಲಿ ಅಲ್ಲಲ್ಲಿ ನಿಂತ ನೀರಿನಲ್ಲಿ ಕಸಕಡ್ಡಿ ಮತ್ತು ಎಲೆಗಳು ಬಿದ್ದು ಕೊಳೆಯುತ್ತವೆ. ಇದರಿಂದ ಹವೆ ಕೆಡುವದು. ಆಹಾರವು ಚೆನ್ನಾಗಿ

ಜೀರ್ಣಿಸುವದಿಲ್ಲ. ಜನರು ವಾಸವಾಗಿರಲಿಕ್ಕೆ ಇಂಥ ಹವೆ ಒಳ್ಳೆಯದಲ್ಲ, ಇದೇ **ರೋಗಕಾರಕ ಹವೆ.**

ಮುಂಬಯಿರಾಜ್ಯವು ಸಾಮಾನ್ಯವಾಗಿ ಉಷ್ಣಹವೆಯ ಪ್ರದೇಶವೆಂದು ತಿಳಿಯುವರು. ಆದರಲ್ಲಿಯೂ, ತಗ್ಗು ಪ್ರದೇಶಗಳಾದ ಕೊಂಕಣ ಹಾಗು ಗುಜ-ರಾತದ ಹವೆಯು ಹೆಚ್ಚು ಉಷ್ಣವಾಗಿರುತ್ತದೆ. ತಪ್ಪಲಿನ (ದೇಶದ) ಹವೆಯು ತುಸು ಕಡಮೆ ಉಷ್ಣವಾಗಿರುವದು. ಇನ್ನೂ ಎತ್ತರ ಎಂದರೆ ಪರ್ವತಪ್ರದೇಶದ ಹವೆಯು ಕೆಲಮಟ್ಟಿಗೆ ತಂಪಾಗಿರುವದು. ಪರ್ವತಶಿಖರಗಳ ಮೇಲಿನ ಹವೆಯು ಹೆಚ್ಚು ತಂಪಾಗಿದ್ದು, ಬೇಸಗೆಯಲ್ಲಿ ಬಹಳ ಆರೋಗ್ಯಕರವಾಗಿರುವದು; ಆದ್ದರಿಂದ ಉಷ್ಣಪ್ರದೇಶಗಳಲ್ಲಿ ವಾಸಿಸುವ ಕೆಲವು ಜನ ಶ್ರೀಮಂತರು, ಬೇಸಗೆ ಯಲ್ಲಿ ಬಿಸಿಲಿನ ತಾಪವನ್ನು ತಪ್ಪಿಸಲು ಪರ್ವತ-ಶಿಖರಗಳಿಗೆ ಹೋಗಿ ವಾಸಿಸು-ವರು. ಬೇಸಗೆಯ ಸೆಕೆಯು ಕಡಮೆಯಾಗುತ್ತಲೇ ಅವರು ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗುವರು. ಸಹ್ಯಾದ್ರಿಯಲ್ಲಿ **ಮಹಾಬಳೇಶ್ವರ, ಮಾಥೇರಾನ, ಪಂಚಗಣಿ** ಹಾಗೂ **ಲೋನಾವಳ** ಇವು ಇಂತಹ **ಬೇಸಗೆಯ ಆರೋಗ್ಯದ ಸ್ಥಳಗಳಾಗಿವೆ.** ಇವುಗಳನ್ನೇ **ಗಿರಿನಿವಾಸ**ಗಳೆಂದೂ ಕರೆಯುವರು. ಗಿರಿನಾರ ಪರ್ವತದಲ್ಲಿ **ಗಿರಿನಾರ** ಎಂಬುದೂ ಗಿರಿನಿವಾಸವಾಗಿದೆ.

ಉಷ್ಣತಾಮಾಪಕದ ಸಹಾಯದಿಂದ ಎಲ್ಲ ಮುಖ್ಯ ಮುಖ್ಯ ಸ್ಥಳಗಳ-ಲ್ಲಿಯೂ, ಪ್ರತಿದಿನದ ಹವೆಯ ಅತಿ ಹೆಚ್ಚು ಮತ್ತು ಅತಿ ಕಡಮೆ ಉಷ್ಣತಾಂಶ-ವನ್ನು ಬರೆದಿಡುವ ವಾಡಿಕೆ ಇರುವದು. ಹೀಗೆ ಒಂದೇ ದಿವಸ ಬೇರೆ ಬೇರೆ ಸ್ಥಳಗಳಲ್ಲಿ ನೋಡಿ ಬರೆದ ಉಷ್ಣತಾಂಶದ ಅಂಕೆಗಳನ್ನು ಕೆಳಗೆ ಕಾಣಿಸಿದೆ:

| ಉಷ್ಣತಾಮಾನ | ವಿಜಾಪುರ | ನಾಸಿಕ | ಕಾರವಾರ | ಠಾಣೆ |
|---|---|---|---|---|
| ಅತಿ ಹೆಚ್ಚು | ೧೦೩° | ೧೦೧° | ೯೫° | ೯೬° |
| ಅತಿ ಕಡಮೆ | ೬೯° | ೬೨° | ೭೬° | ೭೬° |
| ಇವೆರಡರ ನಡುವಿನ ಅಂತರ | ೩೪° | ೩೯° | ೧೯° | ೨೦° |

ಇವುಗಳಿಂದ ನಮಗೆ ಏನು ತಿಳಿಯುವದು ? ಕಾರವಾರ, ಠಾಣೆ ಇವು ಸಮುದ್ರದ ದಂಡೆಯಲ್ಲಿವೆ. ವಿಜಾಪುರ, ನಾಸಿಕ ಪಟ್ಟಣಗಳು ಸಮುದ್ರ

ದಿಂದ ಬಹಳ ದೂರದಲ್ಲಿ ಇರುವವು. ಸಮುದ್ರದ ದಂಡೆಯ ಹವೆಯಲ್ಲಿ ಬಹಳ ಹೆಚ್ಚು ಕಡಮೆಯಾಗುವದಿಲ್ಲ. ಸಮುದ್ರದಿಂದ ದೂರದಲ್ಲಿದ್ದ ಪ್ರದೇಶದ ಹವೆ-ಯಲ್ಲಿ ಬಹಳ ಹೆಚ್ಚು ಕಡಮೆಯಾಗುವದು. ಹೀಗೆಯೇ ನೀವು ವರುಷ ನಿರೀಕ್ಷಣೆ ಮಾಡುತ್ತ ಹೋಗಿರಿ. ಸಮುದ್ರದಂಡೆಯ ಪ್ರದೇಶದಲ್ಲಿ ಬೇಸಗೆ ಮತ್ತು ಚಳಿಗಾಲಗಳ ಉಷ್ಣತಾಮಾನದಲ್ಲಿ ಬಹಳ ಅಂತರವಿರುವದಿಲ್ಲವೆಂದು ನಿಮಗೆ ತಿಳಿಯುವದು. ಇಂತಹ ಹವೆಗೆ **ಸಮಹವೆ** ಎನ್ನುತ್ತೇವೆ. **ಕೊಂಕಣವು ಸಮಹವೆಯ ಪ್ರದೇಶವು.** ವಿಜಾಪುರ ನಾಸಿಕಗಳಲ್ಲಿ ಬೇಸಗೆ ಮತ್ತು ಚಳಿಗಾಲಗಳ ಹವೆಯ ಉಷ್ಣತಾಮಾನದಲ್ಲಿ ಬಹಳ ಹೆಚ್ಚು ಕಡಮೆ ಇರುತ್ತ-ದೆಂದು ತಿಳಿಯುವದು. ಇಂತಹ ಹವೆಗೆ **ವಿಷಮ ಹವೆ** ಎನ್ನುತ್ತಾರೆ. **ದೇಶ (ತಪ್ಪಲು ಪ್ರದೇಶ)ವು ವಿಷಮಹವೆಯ ಪ್ರದೇಶವು.** ಗುಜರಾತದ ಬಯಲು ಸಹ ಸಮುದ್ರದಿಂದ ದೂರವಿರುವದು; ಆದ್ದರಿಂದ **ಗುಜರಾತದ ಹವೆಯು ವಿಷಮವಾಗಿರುವದು.**

ನಿಮಗೆ ಇನ್ನೂ ಒಂದು ಸಂಗತಿ ಗೊತ್ತಾಗುವದು. ಅದೇನೆಂದರೆ: ವಿಜಾಪುರಕ್ಕಿಂತ ನಾಸಿಕವು ಹೆಚ್ಚು ವಿಷಮ ಹವೆಯ ಸ್ಥಳವಾಗಿದೆ. ಮುಂಬಯಿ ರಾಜ್ಯದಲ್ಲಿ **ದಕ್ಷಿಣದಿಂದ ಉತ್ತರಕ್ಕೆ ಹೋದಂತೆ ಹವೆಯು ಹೆಚ್ಚು ವಿಷಮವಾಗಿರುವದು.** ಈ ಕಾರಣದಿಂದಲೇ ಗುಜರಾತವು ಕರ್ನಾಟಕ ಅಥವಾ ಮಹಾರಾಷ್ಟ್ರಕ್ಕಿಂತ ಹೆಚ್ಚು ವಿಷಮಹವೆಯ ಪ್ರದೇಶವಾಗಿರುವದು. ಅಲ್ಲಿ ಬೇಸಗೆಯಲ್ಲಿ ಬಿಸಿಲು ಹೆಚ್ಚು, ಚಳಿಗಾಲದಲ್ಲಿ ಚಳಿ ಹೆಚ್ಚು.

**ಇಡಿ ಮುಂಬಯಿರಾಜ್ಯವು ಉಷ್ಣಹವೆಯ ಪ್ರದೇಶವೆಂದು ಹೇಳು ವರಲ್ಲವೆ ?** ಆದುದರಿಂದ ಮೇಲಿನ ವಿಭಾಗಗಳನ್ನು ಈ ಪ್ರಕಾರ ವರ್ಣಿಸಬಹುದು: **ಕೊಂಕಣವು ಸಮಹವೆಯ ಉಷ್ಣಪ್ರದೇಶ, ದೇಶ** ಮತ್ತು **ಗುಜರಾತಗಳು ವಿಷಮಹವೆಯ ಉಷ್ಣಪ್ರದೇಶಗಳು. ದೇಶಕ್ಕಿಂತ ಗುಜರಾತವು ಹೆಚ್ಚು ವಿಷಮಹವೆಯ ಉಷ್ಣಪ್ರದೇಶವು.**

### ಅಭ್ಯಸನಗಳು

೧. ಒಣ ಹವೆ ಎಂದರೇನು ? ಹವೆಯು ಯಾವ ಕಾಲದಲ್ಲಿ ಒಣದಿರುತ್ತದೆ ?

೨. ಆರ್ದ್ರ ಹವೆ ಎಂದರೇನು? ಹವೆಯು ಯಾವ ಕಾಲದಲ್ಲಿ ಆರ್ದ್ರವಾಗಿರುತ್ತದೆ?

೩. ಮಲೆನಾಡಿನ ಹವೆಯು ಎಂತಹದು, ಯಾಕೆ ?

೪. ಸಮಹವೆ ಎಂದರೇನು ? ಅದು ಯಾವ ಪ್ರದೇಶದಲ್ಲಿ ಇರುತ್ತದೆ ?

೫. ವಿಷಮಹವೆ ಎಂದರೇನು ? ಇದು ಯಾವ ಪ್ರದೇಶದಲ್ಲಿ ಇರುತ್ತದೆ ?

## ೫. ಮಳೆ

ಹವೆಯ ಬಗೆಗೆ ನಮಗೆ ದೊರೆತ ಜ್ಞಾನದ ಸಹಾಯದಿಂದ ಇನ್ನು ಮಳೆಯ ಬಗೆಗೆ ಕೆಲವು ಸಂಗತಿಗಳನ್ನು ತಿಳಿದುಕೊಳ್ಳುವಾ.

ಮನೆಯಲ್ಲಿ ಒಲೆಯ ಮೇಲೆ ಒಂದು ಪಾತ್ರೆಯಲ್ಲಿ ನೀರು ಕಾಯಿಸಲಿಕ್ಕೆ ಇಡಿರಿ; ತುಸು ಹೊತ್ತಿನ ಮೇಲೆ ನೀರು ಕಾಯ್ದು ಉಗಿಯಾಗಹತ್ತುವದು. ಮೊದಲು **ಉಗಿ** ನಮ್ಮ ಕಣ್ಣಿಗೆ **ಕಾಣುವದಿಲ್ಲ.** ಪಾತ್ರೆಯ ಮೇಲೆ ಕೈ ಹಿಡಿದರೆ 'ಉಗಿ ಆಗುತ್ತಿದೆ' ಎಂದು ನಮಗೆ ಎನಿಸುವದು. ಪಾತ್ರೆಯಲ್ಲಿ ನಿಮ್ಮ ಬಾಯಿಂದ ಊದಿರಿ. ಈಗ ಉಗಿಯು ಮೋಡಗಳಂತೆ ತುಸು ಬೆಳ್ಳಗೆ ಕಾಣುವದು. ಏಕೆ? **ಉಗಿಗೆ ತುಸು ತಂಪು ತಗಲಿದರೆ ಮೋಡ**ವಾಗುವದು. ಇನ್ನು ಪಾತ್ರೆಯ ಮೇಲೆ ಒಂದು ಮುಚ್ಚಳವನ್ನು ಇಡಿರಿ. ಕೆಲವು ನಿಮಿಷಗಳಾದ ಮೇಲೆ ಮುಚ್ಚಳವನ್ನು ಎತ್ತಿ ನೋಡಿರಿ. ಅದು ಇನ್ನೂ ತಂಪಾಗಿದೆ. ಅದರ ಬುಡಕ್ಕೆ ನೀರಹನಿಗಳು ಕಾಣುವವು. **ಉಗಿಗೆ ಹೆಚ್ಚು ತಂಪು ತಗಲಿದರೆ ಅದು ನೀರಾಗುವದು.**

ಮುಂಬಯಿರಾಜ್ಯದ ಪಶ್ಚಿಮಕ್ಕೆ ಅರಬೀ ಸಮುದ್ರವು ಪಸರಿಸಿರುವದು. ಅದರ ನೀರು ಬಿಸಿಲಿನಿಂದ ಕಾಯ್ದು ಉಗಿಯಾಗುತ್ತಿರುತ್ತದೆ. ಈ ಉಗಿಯು ಮೇಲೆ ಹೋದಾಗ, ಅವಕ್ಕೆ ಆಕಾಶದೊಳಗಿನ ತಂಪು ಹವೆಯು ತಗಲುವದು. ಹವೆಗೆ ತಂಪು ತಗಲಿದರೆ ಮೋಡಗಳಾಗುತ್ತವೆ. ಜೇಷ್ಠಮಾಸ ಆರಂಭವಾಗುತ್ತಲೆ ನಮ್ಮಲ್ಲಿ **ನೈಋುತ್ಯ ಮನ್ಸೂನ್** ಗಾಳಿಗಳು ಬೀಸಲಾರಂಭಿಸುತ್ತವೆ. ಈ ಗಾಳಿಗಳು ಅರಬೀಸಮುದ್ರದ ಮೇಲ್ಭಾಗದ ಆಕಾಶದೊಳಗಿನ ಮೋಡಗಳನ್ನು ದೂಡಿಕೊಂಡು ಬರುತ್ತವೆ. ಹಾದಿಯಲ್ಲಿ, ಈ ಮೋಡಗಳಿಗೆ ತಂಪು ತಗಲಿದಲ್ಲೆಲ್ಲ ಮಳೆಯಾಗುವದು. ಎತ್ತರವಾದ ಸಹ್ಯಪರ್ವತಗಳ ಮೇಲೆ ಹವೆಯು ಬಹಳ ತಂಪಾಗಿರುತ್ತದೆ. ಆದ್ದರಿಂದ, ಈ ಮೋಡಗಳಿಂದ ಸಹ್ಯಾದ್ರಿ ಮತ್ತು ಅದರ ಸುತ್ತಲಿನ ಮಲೆನಾಡಿನಲ್ಲಿ ಬಹಳ ಮಳೆ ಬೀಳುತ್ತದೆ. ಅತಿ ಎತ್ತರವಾದ ಮಹಾಬಳೇಶ್ವರದಲ್ಲಿ ಪ್ರತಿ ವರುಷ ಸುಮಾರು ೨೫೦ ಇಂಚು ಮಳೆಯಾಗುವದು.

ಸಹ್ಯಾದ್ರಿಯನ್ನು ದಾಟಿದ ಮೋಡಗಳಲ್ಲಿ ಹೆಚ್ಚು ಉಗಿಯು ಉಳಿದಿರುವದಿಲ್ಲ. ಆದ್ದರಿಂದ, ತಪ್ಪಲುಪ್ರದೇಶ (ದೇಶ) ದಲ್ಲಿ ಪೂರ್ವಕ್ಕೆ ಹೋದಂತೆ ಮಳೆಯು ಕಡಮೆಯಾಗುತ್ತ ಹೋಗುವದು. ಇದೇ ಕಾರಣದಿಂದ **ವಿಜಾಪುರ, ಸೊಲ್ಲಾಪುರ** ಮತ್ತು **ಅಹಮ್ಮದನಗರ** ಜಿಲ್ಹೆಗಳ ಪೂರ್ವಭಾಗದಲ್ಲಿ

ತೀರಕಡನೆ ಮಳೆಯಾಗುವದು. ಎಂತಲೇ ಇಲ್ಲಿ ಯಾವಾಗಲೂ ಬರಬೀಳುವ ಅಂಜಿಕೆ ಇರುವದು.




ಆಕೃತಿ ೯.

ನೈಋತ್ಯ ಮನ್ಸೂನ್ ಗಾಳಿಗಳ ಮೂಲಕ ಮುಂಬಯಿರಾಜ್ಯದಲ್ಲಿ ಜೂನದಿಂದ ಸಪ್ಟಂಬರವರೆಗಿನ ನಾಲ್ಕು ತಿಂಗಳಲ್ಲಿ ಮಳೆಯಾಗು-

ತ್ತದೆ. ಇದೇ **ಮುಂಗಾರಿಮಳೆಯು.** ಅಕ್ಟೋಬರ ತಿಂಗಳಿಂದ ಈಶಾನ್ಯ ಮನ್ಸೂನ್ ಗಾಳಿಗಳು ಬೀಸಹತ್ತುವವು. ಈ ಗಾಳಿಗಳು ತರುವ ಮೋಡಗಳಲ್ಲಿ ಉಗಿಯು ಹೆಚ್ಚಾಗಿ ಇರುವದಿಲ್ಲ. ಆದ್ದರಿಂದ ಆಗ ತೀರ ಕಡಮೆ ಮಳೆಯಾಗುವದು. ಅದೇ **ಹಿಂಗಾರಿ ಮಳೆಯು.**

ಮಳೆ ಎಷ್ಟು ಆಯಿತು?— ಎಂಬುದನ್ನು ಇಂಚುಗಳಲ್ಲಿ ಹೇಳುತ್ತಾರೆ. ಮಳೆಯನ್ನು ಅಳತೆಮಾಡುವ ಕ್ರಮವನ್ನು ನೀವು ಮುಂದೆ ಕಲಿಯುವಿರಿ. ಕೊಂಕಣದಲ್ಲಿ ಮಳೆ ಹೆಚ್ಚು; ಒಂದು ವರುಷದಲ್ಲಿ ಸುಮಾರು ೧೦೦ ಇಂಚು ಮಳೆಯಾಗುತ್ತದೆ. ಧಾರವಾಡ–ಬೆಳಗಾವಿಗಳಲ್ಲಿ ಮಳೆ ಮಧ್ಯಮ; ಎಂದರೆ ೪೦–೫೦ ಇಂಚು. ವಿಜಾಪುರ, ಸೊಲ್ಲಾಪುರ ಜಿಲ್ಹೆಗಳಲ್ಲಿ ಮಳೆ ಕಡಮೆ, ಎಂದರೆ ೨೦–೨೫ ಇಂಚು. ಹೀಗೆ ಎಲ್ಲ ಸ್ಥಳಗಳಲ್ಲಿಯೂ ಇಡಿ ವರುಷದ ಮಳೆಯನ್ನು ಅಳೆದು ನೋಡಿ, ತಯಾರಿಸಿದ ನಕಾಶವನ್ನು ಇಲ್ಲಿ ಕೊಟ್ಟಿದೆ. ಒಂದು ತೆಳ್ಳಗಿನ ಕಾಗದ ತೆಗೆದುಕೊಂಡು ೩ನೆಯ ಪುಟದ ಮೇಲಿನ ನಕಾಶದ ಮೇಲೆ ಇಡಿರಿ. ಎಲ್ಲ ಜಿಲ್ಹೆಗಳ ಸೀಮೆಗಳನ್ನು ಒಂದು ಸೀಸದ ಕಡ್ಡಿಯಿಂದ ಗುರುತುಹಾಕಿರಿ. ಆ ಮೇಲೆ ಆ ಕಾಗದವನ್ನು ಮಳೆಯ ನಕಾಶದ ಮೇಲೆ ಇಟ್ಟು ನೋಡಿರಿ. ಮುಂಬಯಿರಾಜ್ಯದಲ್ಲಿ ಯಾವ ಯಾವ ಜಿಲ್ಹೆಯಲ್ಲಿ ಎಷ್ಟೆಷ್ಟು ಮಳೆಯಾಗುತ್ತದೆ—ಎಂಬುದು ನಿಮಗೆ ಸುಲಭವಾಗಿ ತಿಳಿಯುವದು.


DHARWAR

## ಅಭ್ಯಸನಗಳು

೧. ಮಳೆಯು ಹೇಗೆ ಉಂಟಾಗುತ್ತದೆ ?

೨. ಮಳೆಯ ಪ್ರಕಾರಗಳು ಯಾವವು ?

೩. ಮುಂಗಾರಿ ಮಳೆಯು ಯಾವ ತಿಂಗಳುಗಳಲ್ಲಿ ಆಗುತ್ತದೆ ?

೪. ಹಿಂಗಾರಿ ಮಳೆಯು ಯಾವ ತಿಂಗಳುಗಳಲ್ಲಿ ಆಗುತ್ತದೆ ?

೫. ಯಾವ ಮನ್ಸೂನಿನಿಂದ ನಮಗೆ ಹೆಚ್ಚು ಮಳೆಯಾಗುತ್ತದೆ ?

---

# ೩. ಭೂಮಿ

ನೀರಿನ ಪೂರಯಿಕೆ, ಒಳ್ಳೆಯ ಹವೆ ಇರುವಲ್ಲಿ ಫಲವತ್ತಾದ ಭೂಮಿ ಸಿಕ್ಕರೆ ನಾವು ಏನು ಮಾಡಬಹುದು? ಅಲ್ಲಿಯೇ ಒಕ್ಕಲಾಗಿ ನಿಂತು ಹುಲುಸಾದ ಪಯಿರನ್ನು ಬೆಳೆದು ಸುಖವಾಗಿ ಇರುವೆವೆಂದು ನೀವು ಹೇಳುವಿರಿ. ಅದು ಸರಿ! ಆದರೆ ಎಂತಹ ಭೂಮಿ ಒಳ್ಳೆಯದು? ಎಷ್ಟು ತರದ ಭೂಮಿ ಇರುತ್ತದೆ? ಎಂತಹ ಭೂಮಿಯಲ್ಲಿ ಯಾವ ಬೆಳೆ ಚೆನ್ನಾಗಿ ಬರುತ್ತದೆ? ಇದು ನಿಮಗೆ ಗೊತ್ತಿದೆಯೇ?

ಮುಂಬಯಿರಾಜ್ಯದ ಭೂಗುಣವನ್ನು ತೋರಿಸುವ ನಕಾಶವನ್ನು ನೋಡಿರಿ. ಉಸುಕಿನದು, ಮಸಾರಿ (ಕೆಂಪು), ಮಡಿಕಟ್ಟು (ಕರಿಗೆಂಪು), ಎರೆ (ಕರಿ) ಎಂದು ಸಾಧಾರಣವಾಗಿ ನಾಲ್ಕುತರದ ಭೂಮಿಯು ಮುಂಬಯಿರಾಜ್ಯದಲ್ಲಿ ಇದೆಯೆಂದು ನಿಮಗೆ ತಿಳಿಯುವದು. ನಿಮ್ಮ ಜಿಲ್ಹೆಯ ಭೂಮಿ ಎಂತಹದು? ಎರೆಯ ಭೂಮಿ ಎಲ್ಲಿ ಎಲ್ಲಿ ಇರುತ್ತದೆ? ಉಸುಕಿನ ಭೂಮಿ ಯಾವದು?

ಭೂಗುಣದ ಮೇಲಿಂದ ಮುಂಬಯಿರಾಜ್ಯದಲ್ಲಿ ನಾಲ್ಕು ವಿಭಾಗಗಳನ್ನು ಮಾಡಿದೆ. ಆದರೂ ಒಂದೊಂದು ವಿಭಾಗದಲ್ಲಿ ಇನ್ನೊಂದು ಜಾತಿಯ ಭೂಮಿಯು ಇರುವದಿಲ್ಲೆಂದು ತಿಳಿಯಕೂಡದು. ಸ್ಥೂಲಮಾನದಿಂದ ಹೀಗೆ ವಿಭಾಗಗಳನ್ನು ಮಾಡಿದೆಯೆಂದು ನಾವು ತಿಳಿಯಬೇಕು.

ಈ ನಾಲ್ಕು ಜಾತಿಯ ಭೂಮಿಯಲ್ಲಿ **ಎರೆಭೂಮಿ** ಬಹಳ ಕಸುವಿನದು. ಎರೆಮಣ್ಣು ಜಿಗುಟಾಗಿರುತ್ತದೆ. ಹಸಿಯನ್ನು ಹಿಡಿದುಕೊಳ್ಳುವ ಗುಣ ಇದರಲ್ಲಿದೆ. ಎರೆ ಭೂಮಿಯಲ್ಲಿ ಬಿದ್ದ ನೀರು ತೀವ್ರ ಬಸಿದುಹೋಗುವದಿಲ್ಲ. ಈ ಗುಣವು ಬೆಳೆಗಳ ಪೋಷಣೆಗೆ ಬಹಳ ಅನುಕೂಲವಾದುದು. ಆದರೆ ಜಿಗುಟುಮಣ್ಣು, ಸೇಂಗಾ, ಗೆಣಸು, ಉಳ್ಳೇಗಡ್ಡೆ ಮೊದಲಾದುವು ಪುಷ್ಟವಾಗಿ ಬೆಳೆಯಲು ಅಡ್ಡಿ ಮಾಡುವದು; ಆದ್ದರಿಂದ, ನೆಲದಲ್ಲಿ ಫಲಬಿಡುವ ಬೆಳೆಗಳಿಗೆ ಎರೆಭೂಮಿ ಒಳಿತಲ್ಲ.

**ಮಡಿಕಟ್ಟು ಭೂಮಿ** ಕಸುವಿನಲ್ಲಿ ಎರಡನೆಯ ತರಗತಿಯದು. ಆದರೆ ತುಸು ಹೆಚ್ಚು ನೀರಿನ ಪೂರಯಿಕೆಯ ಅನುಕೂಲವಿದ್ದರೆ, ಈ ಭೂಮಿ ಎಲ್ಲ ಬೆಳೆಗಳಿಗೂ ಒಳ್ಳೆಯದು.

**ಮಸಾರಿಭೂಮಿಯು** ಕಸುವಿನಲ್ಲಿ ಮೂರನೆಯ ತರಗತಿಯದು. ಈ ಭೂಮಿಯಲ್ಲಿ ನೀರನ್ನು ಹಿಡಿದಿಟ್ಟುಕೊಳ್ಳುವ ಗುಣವು ಅಲ್ಪಪ್ರಮಾಣದಲ್ಲಿರು

ವದು. ಆದ್ದರಿಂದ ಇದರಲ್ಲಿರುವ ಬೆಳೆಗಳಿಗೆ ಮೇಲಿಂದಮೇಲೆ ನೀರಿನ ಪೂರಯಿಕೆಯಾಗಬೇಕು. ಮಸಾರಿಮಣ್ಣು ಜಿಗುಟಾಗಿರದೆ ಹೆಚ್ಚು ಪೊಳ್ಳಾ-ಗಿರುವದು. ಪೊಳ್ಳುಮಣ್ಣಿನಲ್ಲಿ ಫಲಗಳು ಪುಷ್ಟವಾಗಿ ಬೆಳೆಯಲು ಅವಕಾಶ ವಿರುವದು; ಆದ್ದರಿಂದ ಮಸಾರಿಭೂಮಿಯು ಸೇಂಗಾದ ಬೆಳೆಗೆ ಬಹಳ ಅನುಕೂಲವಾದುದು.

**ಉಸುಕಿನ ಭೂಮಿ** ಕಸುವಿನಲ್ಲಿ ತೀರ ಕೆಳಗಿನ ತರಗತಿಯದು. ಉಸುಕಿನಲ್ಲಿ ನೀರು ಸುರಿದರೆ ಕೂಡಲೆ ಬಸಿದುಹೋಗುವದಲ್ಲವೆ? ನೀರಿನ ಸಂಗಡ ಭೂಮಿಯಲ್ಲಿಯ ಸತ್ತ್ವವೂ ಬಸಿದುಹೋಗುವದು. ಉಸುಕಿನ ಭೂಮಿಯಲ್ಲಿ ಬೆಳೆಗೆ ಸತ್ತ್ವವೂ ಸಿಗುವದಿಲ್ಲ; ಹಸಿಯೂ ಸಿಗುವದಿಲ್ಲ. ಎಂತಲೇ ಇದನ್ನು **ಬಡಭೂಮಿ** ಎಂದು ಹೇಳುವರು. ಪ್ರತಿವರುಷ ಹೊಸ ಮಣ್ಣು ಇಲ್ಲವೆ ಗೊಬ್ಬರ ಹಾಕಿ, ತಪ್ಪದಲೇ ನೀರುಕೊಟ್ಟು, ಈ ಭೂಮಿಯಲ್ಲಿ ಬೆಳೆಯಬೇಕಾಗುವದು.

## ಅಭ್ಯಸನಗಳು

೧. ಭೂಗುಣದ ನಕಾಶವನ್ನು ನಿರೀಕ್ಷಿಸಿ ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ.

ಅ. ನಮ್ಮ ರಾಜ್ಯದ ಯಾವ ದಿಕ್ಕಿಗೆ ಎರೆ ಭೂಮಿ ಇದೆ ?

ಬ. ಮಸಾರಿ ಭೂಮಿಯು ನಿಮಗೆ ಎಲ್ಲೆಲ್ಲಿ ಕಾಣುವದು ?

ಕ. ಉಸುಕಿನ ಭೂಮಿಯು ಎಲ್ಲಿ ಕಾಣುವದು ?

೨. ಕೆಳಗೆ ಒಂದು ಬದಿಗೆ ಭೂಮಿಗಳ ಹೆಸರುಗಳನ್ನೂ ಮತ್ತೊಂದು ಬದಿಗೆ, ಅವುಗಳ ಗುಣಧರ್ಮಗಳನ್ನೂ ಕೊಟ್ಟಿದೆ. ಅವುಗಳನ್ನು ಸರಿಯಾಗಿ ಜೋಡಿಸಿರಿ.

| | |
|---|---|
| ೧. ಎರೆಭೂಮಿ | ಪೊಳ್ಳಾಗಿರುವದು. |
| ೨. ಮಡಿಕಟ್ಟು ಭೂಮಿ | ನೀರನ್ನು ಹಿಡಿದುಕೊಳ್ಳುವದಿಲ್ಲ. |
| ೩. ಮಸಾರಿ ಭೂಮಿ | ಜಿಗಟು ಇರುವದು. |
| ೪. ಉಸುಕಿನ ಭೂಮಿ | ಕಸುವಿನಲ್ಲಿ ಎರಡನೆಯ ತರಗತಿಯದು. |

೩. ಕೆಳಗಿನ ಪ್ರಶ್ನೆಗಳಿಗೆ ಸಂಕ್ಷಿಪ್ತ ಉತ್ತರಕೊಡಿರಿ:

ಅ. ಎರೆಭೂಮಿಯಲ್ಲಿ ಉಳ್ಳೇಗಡ್ಡೆ ಚೆನ್ನಾಗಿ ಬೆಳೆಯಲಾರದು.

ಬ. ಉಸುಕಿನ ಭೂಮಿಗೆ ಪ್ರತಿವರುಷ ಗೊಬ್ಬರ ಹಾಕಲೇಬೇಕು.

ಕ. ಮಸಾರಿಭೂಮಿಯಲ್ಲಿ ಸೇಂಗಾ ಸರಿಯಾಗಿ ಬೆಳೆಯುವದು.

## ೭. ಬೆಳೆಗಳು

ಭೂಮಿ, ನೀರು ಮತ್ತು ಹವೆ ಇವು ಮೂರು ಗೊತ್ತಾದ ಮೇಲೆ ನೀವು ಏನೇನು ಬೆಳೆಯಬೇಕೆನ್ನುವಿರಿ? ಒಬ್ಬೊಬ್ಬ ವಿದ್ಯಾರ್ಥಿ ಒಂದೆರಡು ಬೆಳೆಗಳನ್ನು ಹೇಳಿರಿ.

### ಕೊಂಕಣ

**ಕಾರವಾರದ ರಾಮನಾಯಕ:—** ನಾನು ನೆಲವನ್ನು ಸಮಮಾಡಿ **ಗದ್ದೆಯನ್ನು** ತಯಾರಿಸಿ **ಭತ್ತ** ಬೆಳೆಯುವೆನು. ಸುತ್ತಲೂ **ತೆಂಗಿನ ಗಿಡಗಳನ್ನು** ಹಚ್ಚುವೆನು. ನಾವು ಪ್ರತಿದಿನ ಮುಂಜಾನೆ ಅಕ್ಕಿಯ ಗಂಜಿಯನ್ನು ಕುಡಿಯುತ್ತೇವೆ. ಮಧ್ಯಾಹ್ನ, ರಾತ್ರಿ ಅನ್ನವನ್ನು ಉಣ್ಣುವೆವು. ಹಸಿ ಕೊಬ್ಬರಿಯಂತೂ ನಮಗೆ ಬೇಕೇಬೇಕು.

**ರತ್ನಾಗಿರಿಯ ಸಖಾರಾಮ ಅಂಜರ್ಲೆ:—** ನಾನು ಭತ್ತ ಬೆಳೆಯುವದಂತೂ ಸರಿಯೇ. ಮಸಾರಿಭೂಮಿ ಇದ್ದಲ್ಲಿ **ಆಪೂಸ್** ಮಾವಿನ ಗಿಡಗಳನ್ನು ಹಚ್ಚುವೆನು. ನಾಲ್ಕಾರು **ಗೋಡಂಬೆಯ** ಹಾಗೂ **ಹಲಸಿನ** ಮರಗಳೂ ನನಗೆ ಬೇಕು.

**ಠಾಣೆ ಜಿಲ್ಲೆಯ ಭಿಕು ಮಾಳಿ:—** ನನಗೆ ಭತ್ತದ ಗದ್ದೆಗಿಂತ ತೋಟದ ಮೇಲೆ ಹೆಚ್ಚು ಪ್ರೀತಿ; **ಚಿಕ್ಕು–ಬಾಳೆ–ಮೋಸಂಬಿ ಹಣ್ಣುಗಳನ್ನೂ, ವೀಳ್ಯದೆಲೆಯ** ಬಳ್ಳಿಗಳನ್ನೂ ಬೆಳೆಯಬೇಕೆನ್ನುವೆನು. ನಮಗೆ ಮುಂಬಯಿಯ ಪೇಟೆ ಬಹಳ ಸಮೀಪವಿದೆ. ಹಣ್ಣು–ಹಂಪಲಗಳನ್ನು ಮಾರಾಟ ಮಾಡಿ ಕೈತುಂಬ ರೊಕ್ಕ ತರುವೆನು.

### ಮಲೆನಾಡು

**ಸಿರಸಿಯ ಶಿವರಾಮ ಹೆಗಡೆ:—** ನಾನು ಅಡಿಕೆಯ ತೋಟವನ್ನು ಮಾಡುವೆನು. ಯಾಲಕ್ಕಿಯ ಗಿಡಗಳನ್ನೂ ಮೆಣಸಿನ ಬಳ್ಳಿಗಳನ್ನೂ ಬೆಳೆಸುವೆನು. ತುಸು ಕಾಫಿಯ ಗಿಡಗಳನ್ನೂ ಹಚ್ಚುವೆನು. ಇವೆಲ್ಲ ತುಂಬ ರೊಕ್ಕದ ಬೆಳೆಗಳು. ಮೇಲಾಗಿ ಮುಂಬಯಿರಾಜ್ಯದಲ್ಲಿ ಬೇರೆ ಯಾವ ಪ್ರದೇಶದವರೂ ಇವುಗಳನ್ನು ಬೆಳೆಯಲಾರರು.

**ಲೋಣಾವಳಿಯ ಭಿವಾ ಕಾತಕರಿ:—** ನನಗೆ ಅರಣ್ಯ ಬಹಳ ಸೇರುತ್ತದೆ. ಗೋಡಂಬೆಯ ಬೀಜಗಳನ್ನು ಆರಿಸಿ ತರುವೆನು. ತಿನ್ನಲಿಕ್ಕೆ ಪುಷ್ಟಿಕರವಾದ ಗೋಡಂಬೆಗಳನ್ನು ತಯಾರಿಸುವೆನು. ಕೇರು–ಗೋಡಂಬೆಯ

Copyright.



ಬೀಜಗಳಿಂದ ಎಣ್ಣೆಯನ್ನು ತೆಗೆಯುವೆನು. ಔಷಧಕ್ಕೆ ಉಪಯೋಗವಾಗುವ ಎಷ್ಟೋ ವನಸ್ಪತಿಗಳನ್ನು ಗುರುತಿಸಿ ನಾನು ಅರಣ್ಯದಿಂದ ತರಬಲ್ಲೆ.

### ಮಲೆನಾಡ ಸೆರಗು

**ಧಾರವಾಡದ ಪಾಟೀಲ ಸಂಗಣ್ಣ:—** ನಾನು **ಭತ್ತ, ಕಬ್ಬು, ಜೋಳ, ಬೇಳೆಯ ಕಾಳು, ಸೇಂಗಾ** ಎಲ್ಲವನ್ನೂ ತುಸು ತುಸು ಬೆಳೆಯ ಬೇಕೆನ್ನುವವನು.

**ನಿಪ್ಪಾಣಿಯ ಉಪಾಧ್ಯ ಭರಮಣ್ಣ:— ತಂಬಾಕು, ಮೆಣಸಿನಕಾಯಿ** ಇವುಗಳನ್ನು ಚೆನ್ನಾಗಿ ಬೆಳೆಸುವ ಹದ ನನಗೆ ಗೊತ್ತು. ಅವುಗಳನ್ನೇ ನಾನು ಬೆಳೆಯುವೆನು.

**ಪುಣೆಯ ಕಾಳೂ ಫುಲಾರಿ!—ಕಾಯಿಪಲ್ಯೆ, ಬಟಾಟಿ (ಆಲೂಗಡ್ಡೆ), ಮೋಸಂಬಿ** ಬೆಳೆಯುವಲ್ಲಿ ನನ್ನ ಕೈ ಮೇಲು. ಇವುಗಳನ್ನು ಮಾರಲು ಪುಣೆಯ ಪೇಟೆಯು ಬಹಳ ಅನುಕೂಲವಾಗಿದೆ.

**ನಾಸಿಕದ ತ್ರ್ಯಂಬಕ ಮಾಳಿ:— ದ್ರಾಕ್ಷೆಯನ್ನು** ಬೆಳೆಯಲಿಕ್ಕೆ ನಾನು ಮುಂದು.

### ಬೆಳವಲ (ಬಯಲುಸೀಮೆ)

**ಗದುಗಿನ ದೊಡ್ಡಮನಿ ಶಂಕರಣ್ಣ:—** ಎರೆಯ ಭೂಮಿಯಲ್ಲಿ ಹತ್ತಿ, ಗೋದಿ ಬೆಳೆಯುವದೇ ಒಂದು ಚೆಂದ. ಹುಲುಸಾಗಿ ಬೆಳೆದ ಹತ್ತಿಯ ಹೊಲ ದಲ್ಲಿ ನೂರಾರು ಹೆಣ್ಣು ಮಕ್ಕಳು ಹತ್ತಿಯನ್ನು ಬಿಡಿಸಿ ಉಡಿಯಲ್ಲಿ ಹಾಕು-ತ್ತಿರುವಾಗ ನನ್ನ ಹೊಲದ ಸೊಬಗನ್ನು ನೋಡಲು ಬನ್ನಿರಿ.

**ಡೋಣಿಸಾಲಿನ ಭೀಮಣ್ಣ:—** ಮುತ್ತಿನ ಕಾಳಿನಂತಹ ಬಿಳಿಜೋಳದ ಬೆಳಸಿಯನ್ನು ತಿನ್ನಲು ನನ್ನ ಹೊಲಕ್ಕೆ ಬನ್ನಿರಿ. 'ಡೋಣಿ ಬೆಳೆದರೆ ಓಣಿ ತುಂಬ ಜೋಳ' ಎಂಬ ನಾಣ್ಣುಡಿಯೇ ಇದೆ. ಗೋದಿಯೂ ನನ್ನ ಪ್ರೀತಿಯ ಬೆಳೆ. ಹಿಂಗಾರಿ ಮಳೆ ಮಾತ್ರ ಚೆನ್ನಾಗಿ ಆಗಬೇಕು.

**ಪಂಢರಪುರದ ವಿಠೂಭಾವೂ:—** ವಿಜಾಪುರ ಜಿಲ್ಲೆಯ ಭೀಮಣ್ಣ ಮತ್ತು ನಾನು ಅಣ್ಣ-ತಮ್ಮಂದಿರು. ಜೋಳವೇ ನಮಗೆ ಮುಖ್ಯ ಬೆಳೆ. ಸೇಂಗಾ-ಹತ್ತಿಗಳನ್ನೂ ನಾವು ಚೆನ್ನಾಗಿ ಬೆಳೆಯಬಲ್ಲೆವು. ಆದರೆ ಸಕಾಲಕ್ಕೆ ಮಳೆಯಾಗದೆ ಬರಬಿದ್ದೀತೆಂಬ ಅಂಜಿಕೆ ಮಾತ್ರ ನಮಗೆ ತಪ್ಪಿದ್ದಲ್ಲ.

**ಅಹಮ್ಮದನಗರದ ದಗಡೋಬಾ:—** ನನ್ನ ಹಾಡೂ ಅಂತಹದೇ. ಆದರೆ ಸರಕಾರದವರು ಇತ್ತೀಚೆಗೆ ನಮ್ಮ ಜಿಲ್ಲೆಯ ಎಷ್ಟೋ ಕಡೆಗಳಲ್ಲಿ ಹೊಳೆ-ಹಳ್ಳಗಳಿಂದ ಕಾಲುವೆಗಳನ್ನು **ತೋಡಿಸಿದ್ದಾರೆ.** ಕಾಲುವೆಯ ನೀರಿನಿಂದ

ನಾನು ಕಬ್ಬು ಬೆಳೆಯುವೆನು; ಜೋಳ-ಹತ್ತಿಗಳನ್ನು ಬೆಳೆಸುವೆನು. ಬರದ ಅಂಜಿಕೆ ಈಗ ನಮಗೆ ಕಡಮೆಯಾಗಿದೆ.

**ಖಾನದೇಶದ ಖಂಡೋಬಾ:**— ಉತ್ತಮತರಗತಿಯ ಹತ್ತಿ ಬೇಕಾದರೆ ನನ್ನನ್ನು ನೆನೆಯಬೇಕು. ಗೋದಿ, ಜೋಳಗಳನ್ನೂ ನಾನು ಚೆನ್ನಾಗಿ ಬೆಳೆಯುವೆನು.

## ಗುಜರಾತದ ಬಯಲು

ಸಾಮಳುಭಾಯಿ, ಲಲ್ಲೂಭಾಯಿ, ಕಿಸನಚಂದ! ನೀವು ಏನೇನು ಬೆಳೆಯುವಿರಿ? ಹೇಳಿರಿ ನೋಡುವಾ!

**ಸಾಮಳುಭಾಯಿ:**— ನಾನು ಮೇಸಾಣಾ ಜಿಲ್ಹೆಯವನು. ಹತ್ತಿಯನ್ನು ಬೆಳೆಯುವದೇ ನನಗೆ ಸೇರುತ್ತದೆ.

**ಲಲ್ಲೂಭಾಯಿ:**— ಖಂಬಾಯತ ಆಖಾತದ ಸುತ್ತಲಿನ ಪ್ರದೇಶವು ನನ್ನದು! ಗೋದಿಯೇ ನನ್ನ ಮುಖ್ಯ ಬೆಳೆ. ತುಸು ತಂಬಾಕನ್ನೂ ಬೆಳೆ-ಯುತ್ತೇನೆ.

**ಕಿಸನಚಂದ:**— ನಾನು ದಕ್ಷಿಣ ಗುಜರಾತದವನು. ಸುರತ ನನ್ನ ಊರು. ಜೋಳ-ಹತ್ತಿಗಳನ್ನು ಬೆಳೆಯುವದು ನನಗೆ ಗೊತ್ತಿದೆ.

ಓಹೋ! ನೀವೆಲ್ಲರೂ ನಿಮ್ಮ ನಿಮ್ಮ ಪ್ರದೇಶಗಳಲ್ಲಿ ಕಾಣುವ ಮುಖ್ಯ ಬೆಳೆಗಳನ್ನೇ ಹೇಳಿದಿರಿ. ಆದರೆ ಯಾವ ಬೆಳೆಗೆ ಏನೇನು ಅನುಕೂಲತೆ ಬೇಕೆಂಬುದನ್ನು ತಿಳಿದುಕೊಂಡರೆ, ನೀವು ನಿಮ್ಮ ನಿಮ್ಮ ಭೂಮಿಗಳಲ್ಲಿ ಬೇರೆ ಪಯಿರುಗಳನ್ನೂ ಬೆಳೆಯಬಹುದಲ್ಲವೆ? ಹಾಗಾದರೆ ನಮ್ಮ ಜೀವನಕ್ಕೆ ಬೇಕಾಗುವ ಭೂಮಿಯ ಹುಟ್ಟುವಳಿಗಳು ಯಾವವು? ಅವುಗಳ ಪಟ್ಟಿಯನ್ನು ಮೊದಲು ತಯಾರಿಸೋಣ.

ಹುಲ್ಲುಕಾಳುಗಳು:— (೧) ಜೋಳ, ಸಜ್ಜೆ, ಗೋದಿ, ರಾಗಿ, ಗೋವಿನ ಜೋಳ ಮುಂತಾದುವು—ರೊಟ್ಟಿಯನ್ನು ಮಾಡಲಿಕ್ಕೆ.

(೨) ಭತ್ತ, ನವಣೆ, ಸಾವೆ, ಬರಗು ಮುಂತಾದುವು ಅನ್ನದ ಊಟಕ್ಕೆ.

ಬೇಳೆಯ ಕಾಳುಗಳು:— ಕಡಲೆ, ತೊಗರಿ, ಹೆಸರು, ಮಡಿಕೆ, ಅಲಸಂದಿ, ಅವರೆ ಮುಂತಾದುವು ಪಲ್ಯೆ-ಪದಾರ್ಥಗಳನ್ನು ತಯಾರಿಸಲಿಕ್ಕೆ.

ಎಣ್ಣೆಯ ಕಾಳುಗಳು:— ಸೇಂಗಾ (ನೆಲಗಡಲೆ), ಕುಸುಬೆ, ಎಳ್ಳು, ಔಡಲ, ಅಗಸೆ ಮುಂತಾದುವು ಎಣ್ಣೆಯ ಸಲುವಾಗಿ.

ಬಟ್ಟೆ-ಬರೆಗಳಿಗೆ:— ಹತ್ತಿ, ನಾರು (ಸಣಬು), ಪುಂಡಿ ಮೊದಲಾದುವು.

ಬೆಲ್ಲ-ಸಕ್ಕರೆಗಳಿಗೆ:— ಕಬ್ಬು.

ಮಸಾಲೆಯ ವಸ್ತುಗಳು:— ಮೆಣಸಿನಕಾಯಿ, ಮೆಣಸು, ಲವಂಗ, ಯಾಲಕ್ಕಿ ಮೊದಲಾದುವು.

ಗಡ್ಡೆಗಳು:— ಆಲೂಗಡ್ಡೆ, ಗೆಣಸು, ಗಜ್ಜರಿ, ಉಳ್ಳೇಗಡ್ಡೆ, ಅರಿಸಿಣ, ಶುಂಠಿ ಮೊದಲಾದುವು.

ಹಣ್ಣು–ಹಂಪಲುಗಳು:— ಚಿಕ್ಕು, ಮೋಸಂಬಿ, ದ್ರಾಕ್ಷೆ, ಕಿತ್ತಳೆ, ಮಾವು, ಬಾಳೆ, ಪೇರಲ ಮುಂತಾದುವು.

ಇವಲ್ಲದೆ ಕಾಯಿಪಲ್ಲೆ, ತೆಂಗು, ಅಡಿಕೆ, ವೀಳ್ಯದೆಲೆ ಮೊದಲಾದ ಅನೇಕ ವಸ್ತುಗಳು ನಮಗೆ ಭೂಮಿಯಿಂದ ದೊರೆಯುತ್ತವೆ.

## ಮುಂಗಾರಿ–ಹಿಂಗಾರಿ ಬೆಳೆಗಳು.

ನಮ್ಮ ಬೆಳೆಗಳು ವಿಶೇಷವಾಗಿ ಮಳೆಯನ್ನೇ ಅವಲಂಬಿಸಿರುವವು ಎಂಬುದನ್ನು ನಾವು ತಿಳಿದುಕೊಂಡಿರುವೆವು. ನಮ್ಮ ರಾಜ್ಯದಲ್ಲಿ ಮುಂಗಾರಿ ಮಳೆ, ಹಿಂಗಾರಿಮಳೆ— ಎಂದು ವರುಷದಲ್ಲಿ ಎರಡು ಕಾಲದಲ್ಲಿ ಮಳೆಯಾಗುವದು ನಮಗೆ ತಿಳಿದಿದೆ. ಮುಂಗಾರಿ ಮಳೆಯನ್ನೇ ಹೆಚ್ಚಾಗಿ ಅವಲಂಬಿಸಿದ ಬೆಳೆಗಳಿಗೆ **ಮುಂಗಾರಿ ಬೆಳೆ** ಎನ್ನುವರು. ಹಿಂಗಾರಿ ಮಳೆಯನ್ನು ಅವಲಂಬಿಸಿದವು **ಹಿಂಗಾರಿ ಬೆಳೆಗಳು.** ಮುಂಗಾರಿ ಬೆಳೆಗಳಿಗೆ ಹೆಚ್ಚು ನೀರು ಬೇಕು, ಹಿಂಗಾರಿ ಬೆಳೆಗಳಿಗೆ ಕಡಮೆ ನೀರು ಬೇಕು. ಭತ್ತ, ಗೋವಿನ ಜೋಳ, ಸಜ್ಜೆ, ಬೇಳೆಯ ಕಾಳು, ಎಣ್ಣೆಯ ಕಾಳುಗಳು, ಮೆಣಸಿನಕಾಯಿ, ತಂಬಾಕು, ಮತ್ತು ಹತ್ತಿ ಮುಂತಾದುವು ಮುಂಗಾರಿ ಬೆಳೆಗಳು. ಗೋದಿ, ಕಡಲೆ, ಕುಸುಬೆ— ಇವು ಹಿಂಗಾರಿ ಬೆಳೆಗಳು. ಜೋಳವು ಮುಂಗಾರಿ ಹಿಂಗಾರಿ ಎರಡರಲ್ಲಿಯೂ ಬರುತ್ತದೆ. ಕಬ್ಬು ಸಾಧಾರಣ ಒಂದು ವರುಷದ ಬೆಳೆ. ನೀರುಣಿಸಿ ಗೋವಿನ ಜೋಳವನ್ನು ಹಿಂಗಾರಿಯಲ್ಲಿಯೂ ಬೆಳೆಸುವರು. ಕಾಯಿಪಲ್ಯೆಗಳನ್ನು ಇಡಿಯ ವರುಷದಲ್ಲಿ ಬೇಕಾದಾಗ ಬೆಳೆಯಬಹುದು.

**೧. ಭತ್ತ**:— ಇದು ಮುಂಗಾರಿ ಬೆಳೆ. ಇದಕ್ಕೆ ನೀರು ಹೆಚ್ಚಿಗೆ ಬೇಕು, ಭತ್ತದ ಗದ್ದೆಯಲ್ಲಿ ನೀರು ಹರಿಯುತ್ತಿದ್ದಷ್ಟು ಒಳಿತು. ಬರೇ ಮಳೆಯ ನೀರಿನಿಂದಲೆ ಬೆಳೆಯಬೇಕಾದರೆ, ಕನಿಷ್ಠ ೪೦ ಇಂಚು ಮಳೆಯಾಗಬೇಕು. ಇದಕ್ಕೆ ರೇವೆಯ ಮತ್ತು ಮಡಿಕಟ್ಟಿನ ಭೂಮಿ ಒಳ್ಳೆಯದು. ಉಪ್ಪು ಬೆರೆತ ಉಸುಕಿನ ಭೂಮಿಯಲ್ಲಿಯೂ ಇದು ಬೆಳೆಯುವದು. ತೀರ ಕಪ್ಪುಭೂಮಿಯಲ್ಲಿ ಭತ್ತವು ಚೆನ್ನಾಗಿ ಬರುವದಿಲ್ಲ. ಭತ್ತದ ಬೆಳೆಗೆ ಉಷ್ಣ ಹವೆ ಬೇಕು;




ಆಕೃತಿ ೧೦

ಆರ್ದ್ರ ಹವೆಯ ಉಷ್ಣಪ್ರದೇಶವಾದರೆ ಇನ್ನೂ ಒಳಿತು. ಎಂದ ಮೇಲೆ ಮುಂಬಯಿರಾಜ್ಯದಲ್ಲಿ ಭತ್ತ ಯಾವ ಯಾವ ಪ್ರದೇಶದಲ್ಲಿ ಬೆಳೆಯಬಹುದು?

ಇಲ್ಲಿ ಕಾಣಿಸಿದ ನಕಾಶವನ್ನು ನೋಡಿರಿ. ಜೊತೆಗೆ ೨೬ನೆಯ ಪುಟದ

ಮೇಲೆ ತೋರಿಸಿದ ಮಳೆಯ ನಕಾಶವನ್ನೂ ನೋಡಿರಿ. ಹೆಚ್ಚಾಗಿ ಮಳೆ ಬೀಳುವ ಕೊಂಕಣದ ಜಿಲ್ಹೆಗಳು, ಮಲೆನಾಡು—ಇವು ಭತ್ತದ ಬೆಳೆಗೆ ಅನುಕೂಲವಾದ ಪ್ರದೇಶಗಳಾಗಿವೆ. ಧಾರವಾಡ, ಬೆಳಗಾವಿ, ಕೊಲ್ಹಾಪುರ, ಸಾತಾರೆ, ಪುಣೆ ಜಿಲ್ಹೆಗಳ ಪಶ್ಚಿಮ ಭಾಗಗಳಲ್ಲಿಯೂ ಭತ್ತ ಬೆಳೆಯುವದು. ನೀರಾವರಿಯ ಅನುಕೂಲವಿದ್ದಲ್ಲಿಯಂತೂ ಎಲ್ಲ ಕಡೆಯಲ್ಲಿ ಭತ್ತವನ್ನು ಬೆಳೆಯಬಹುದು.

೨. **ಜೋಳ:**— ಇದಕ್ಕೆ ಉಷ್ಣ ಹವೆ ಬೇಕು. ಇದು ಸಾಧಾರಣ ೨೦–೨೫ ಇಂಚು ಮಳೆ ಬೀಳುವ ಎಲ್ಲ ಪ್ರದೇಶಗಳಲ್ಲಿ ಬೆಳೆಯುವದು. ಹೆಚ್ಚು ಮಳೆಯಾದರೆ ಬೆಳೆ ಕೊಳೆಯುವದು; ಆದ್ದರಿಂದ ಕೊಂಕಣ ಹಾಗು ಮಲೆನಾಡು ಗಳಲ್ಲಿ ಜೋಳ ಬೆಳೆಯಲಾರದು.

ಹೊಳೆಯ ಅಂಚಿನ ರೇವೆಮಣ್ಣು ಮತ್ತು ಮಡಿಕಟ್ಟು ಭೂಮಿ—ಇವು ಜೋಳದ ಬೆಳೆಗೆ ಉತ್ತಮ. ಎರೆಮಣ್ಣಿನಲ್ಲಿಯ ಹಸಿಯು ತೀವ್ರ ಕಡಮೆ ಯಾಗುವದಿಲ್ಲವೆಂದು ನಮಗೆ ಈ ಮೊದಲೇ ತಿಳಿದಿದೆ. ಆದ್ದರಿಂದ ಹಿಂಗಾರಿ ಯಲ್ಲಿ ಮಳೆ ಕಡಮೆಯಾದರೂ ಎರೆ ಭೂಮಿಯಲ್ಲಿ ಜೋಳ ಬೆಳೆಯುವದು. ಮಾಗುವಕಾಲಕ್ಕೆ ಜೋಳಕ್ಕೆ ತುಸು ಚಳಿಯು ಬೇಕು. ಆದ್ದರಿಂದ ವಿಷಮ ಹವೆಯ ಪ್ರದೇಶವೇ ಜೋಳಕ್ಕೆ ಒಳ್ಳೆಯದು. ಎಂದ ಮೇಲೆ ಮುಂಬಯಿ ರಾಜ್ಯದಲ್ಲಿ ಭತ್ತ ಬೆಳೆಯುವ ಪ್ರದೇಶವನ್ನು ಬಿಟ್ಟು ಉಳಿದ ಎಲ್ಲ ಕಡೆಯಲ್ಲಿಯೂ ಜೋಳ ಬೆಳೆಯುತ್ತದೆಂದು ನಮಗೆ ಸ್ಪಷ್ಟವಾಗುವದು. ಆದರಲ್ಲಿಯೂ ಕೃಷ್ಣಾ-ಗೋದಾವರಿ ನದಿಗಳ ಕೊಳ್ಳದ ಪ್ರದೇಶದಲ್ಲಿ ಜೋಳವು ಚೆನ್ನಾಗಿ ಬೆಳೆಯುವದು. **ಮುಂಬಯಿ ರಾಜ್ಯದಲ್ಲಿ ಜೋಳವೇ ಆಹಾರಧಾನ್ಯದ ಮುಖ್ಯ ಬೆಳೆಯೆನಿಸಿದೆ.**

೩. **ಸಜ್ಜೆ:**— ಮುಂಬಯಿ ರಾಜ್ಯದಲ್ಲಿ ಸಜ್ಜೆಯು ಎರಡನೆಯ ನಂಬರಿನ ಆಹಾರಧಾನ್ಯದ ಬೆಳೆಯಾಗಿದೆ. ಇದಕ್ಕೆ ಉಷ್ಣ ಹವೆ ಬೇಕು. ಜೋಳಕ್ಕಿಂತ ತುಸು ಕಡಮೆ ಮಳೆಬೇಕು. ಸಾಧಾರಣ ೧೭ ರಿಂದ ೨೦ ಇಂಚು ಮಳೆ ಬೀಳುವ ಪ್ರದೇಶದಲ್ಲಿ ಇದು ಬೆಳೆಯುವದು. ಹೆಚ್ಚು ಮಳೆಯಾದರೆ ಬೆಳೆ ಕೊಳೆಯುವದು. ಆದರೆ ಸಜ್ಜೆಗೆ ಮೇಲಿಂದ ಮೇಲೆ ತುಸು ತುಸು ಮಳೆಯಾಗಬೇಕು. ಆದ್ದರಿಂದ ಇದು ಕೇವಲ ಮುಂಗಾರಿಯ ಬೆಳೆಯಾಗಿದೆ.

ಮಡಿಕಟ್ಟಿನ ಭೂಮಿ ಸಜ್ಜೆಯ ಬೆಳೆಗೆ ಒಳ್ಳೆಯದು. ಮಸಾರಿ ಭೂಮಿ ಮತ್ತು ಸ್ವಲ್ಪ ಉಸುಕುಕೂಡಿದ ಎರೆಮಣ್ಣಿನಲ್ಲಿಯೂ ಇದು ಬೆಳೆಯುವದು. ಮಾಗುವಕಾಲಕ್ಕೆ ಜೋಳಕ್ಕಿಂತ ಸಜ್ಜೆಗೆ ಹೆಚ್ಚು ಚಳಿಯು ಬೇಕು. ಆದ್ದರಿಂದ ಹೆಚ್ಚು ವಿಷಮಹವೆಯ ಪ್ರದೇಶವು ಸಜ್ಜೆಗೆ ಒಳಿತಾದುದೆಂದು ತಿಳಿಯು-

ವದಲ್ಲವೆ? ಎಂದ ಮೇಲೆ ಕರ್ನಾಟಕದಿಂದ ಉತ್ತರಕ್ಕೆ ಹೋದಂತೆ ಸಜ್ಜೆಯ ಬೆಳೆಯು ಹೆಚ್ಚಾಗುತ್ತ ಹೋಗುವದೆಂದು ಸ್ಪಷ್ಟವಾಯಿತು. ಆದ್ದರಿಂದ




ಆಕೃತಿ ೧೧.

(ಕೊಂಕಣ ಬಿಟ್ಟು) ಮಹಾರಾಷ್ಟ್ರದ ಉತ್ತರಭಾಗ ಮತ್ತು ಗುಜರಾತಗಳಲ್ಲಿ ಸಜ್ಜೆ ಹೆಚ್ಚಿಗೆ ಬೆಳೆಯುವದು.

೪. **ಗೋದಿ:**— ಇದು ನಮಗೆ ಒಳ್ಳೆಯ ಶಕ್ತಿಯನ್ನು ಕೊಡುವ ಒಳ್ಳೆಯ ಕಸುವಿನ ಎರೆ ಮತ್ತು ರೇವೆಯ ಭೂಮಿಯಲ್ಲಿ




ಆಕೃತಿ ೧೩.

ಇದು ಚೆನ್ನಾಗಿ ಬೆಳೆಯುವದು. ಗೋದಿಯು ಮುಖ್ಯವಾಗಿ ಚಳಿಗಾಲದ ಬೆಳೆ. ಇದಕ್ಕೆ ಒಣಹವೆ ಮತ್ತು ತುಸು ಹೆಚ್ಚು ಚಳಿ ಬೇಕು. ಆದ್ದರಿಂದ ಈಶಾನ್ಯ

ಮನ್ಸೂನ್ ಗಾಳಿಯೆ ಗೋದಿಗೆ ಹೆಚ್ಚು ಹಿತಕರವಾಗಿದೆ. ಆರ್ದ್ರ ಹವೆಯಿಂದ ಗೋದಿಗೆ 'ಕುಂಕುಮ' ರೋಗ ಬರುವದು. ಜೋಳ, ಸಜ್ಜೆಗಳಿಗಿಂತಲೂ




ಆಕೃತಿ ೧೩.

ಗೋದಿಗೆ ಕಡಮೆ ನೀರುಬೇಕು. ಈ ಕಾರಣಗಳಿಂದ ಗೋದಿಯು ಹಿಂಗಾರಿಯ ಬೆಳೆಯಾಗಿದೆ. ಎಂದ ಮೇಲೆ ಮುಂಬಯಿ

ಗೋದಿಯು ಎಲ್ಲಿ ಎಲ್ಲಿ ಚೆನ್ನಾಗಿ ಬೆಳೆಯುವದು ಹೇಳಿರಿ. ನರ್ಮದಾ, ತಾಪಿ, ಗೋದಾವರೀ ಮತ್ತು ಕೃಷ್ಣಾ ನದಿಗಳ ಕೊಳ್ಳದ ಪ್ರದೇಶಗಳು




ಆಕೃತಿ ೧೪.

ಗೋದಿಯ ಬೆಳೆಗೆ ಬಹಳ ಅನುಕೂಲವಾಗಿವೆ. ಸಾಮಾನ್ಯವಾಗಿ ಬೆಳವಲಿನ ಎರೆಯ ಭೂಮಿಯಲ್ಲಿ ಹಾಗೂ ಅಹಮದಾಬಾದ, ಬಡೋದೆ ಜಿಲ್ಲೆಗಳ

ಬಯಲಿನಲ್ಲಿ ಗೋದಿಯು ಹುಲುಸಾಗಿ ಬೆಳೆಯುವದು. ಮುಂಬಯಿರಾಜ್ಯದಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹೋದಂತೆ ಗೋದಿಯ ಬೆಳೆ ಹೆಚ್ಚುವದು. ಯಾಕೆ ?

**೫. ಎಣ್ಣೆಯ ಕಾಳುಗಳು:—** ಮುಂಬಯಿ ರಾಜ್ಯದಲ್ಲಿ ಎಣ್ಣೆಯ ಕಾಳುಗಳ ಬೆಳೆಗಳಲ್ಲಿ ಸೇಂಗಾ ಬೆಳೆಯೇ ಮುಖ್ಯವಾಗಿದೆ. ಇದು ಮುಂಗಾರಿಯ ಬೆಳೆ. ಸಾಮಾನ್ಯವಾಗಿ ಮುಂಗಾರಿಯ ಜೋಳ ಮತ್ತು ಸಜ್ಜಿಗಳು ಬೆಳೆಯುವ ಎಲ್ಲ ಪ್ರದೇಶಗಳಲ್ಲಿಯೂ ಸೇಂಗಾಬೆಳೆಯು ಚೆನ್ನಾಗಿ ಬರುತ್ತದೆ.

ನೆಲವು ಪೊಳ್ಳಾಗಿರದಿದ್ದರೆ ಸೇಂಗಾ ಬೀಜಗಳು ಹುಲುಸಾಗಿ ಬೆಳೆಯಲು ಅಡ್ಡಿಯಾಗುತ್ತದೆ. ಆದ್ದರಿಂದ ಜಿಗುಟಾಗಿರುವ ಪೂರ್ಣ ಎರೆಭೂಮಿಯಲ್ಲಿ ಸೇಂಗಾ ಹೆಚ್ಚು ಫಲವತ್ತಾಗಿ ಬೆಳೆಯುವದಿಲ್ಲ.

**ಕುಸುಬೆ:—** ಹಿಂಗಾರಿಯ ಬೆಳೆ ಬರುವ ಎಲ್ಲ ಪ್ರದೇಶಗಳಲ್ಲಿ ಕುಸುಬೆ ಬೆಳೆಯುವದು. ಸೇಂಗಾ ಮತ್ತು ಕುಸುಬೆಗಳಿಂದ ಎಣ್ಣೆಯನ್ನು ತೆಗೆಯುವರಲ್ಲದೆ, ಅವುಗಳ ಹಿಂಡಿಯನ್ನು ದನಗಳಿಗೆ ತಿನ್ನಿಸುತ್ತಾರೆ. ಹಿಂಡಿಯನ್ನು ಗೊಬ್ಬರದಂತೆ ಭೂಮಿಗೂ ಉಪಯೋಗಿಸುತ್ತಾರೆ. ಇದರಿಂದ ಭೂಮಿಯು ಫಲವತ್ತಾಗುವದು. ಎಳ್ಳು-ಔಡಲ-ಅಗಸೆಗಳ ಉಪಯೋಗವೂ ಇದೇ ಮೇರೆಗೆ ಆಗುವದು.

**೬. ಹತ್ತಿ:—** ಇದಕ್ಕೆ ಎರೆಭೂಮಿ, ಉಷ್ಣಹವೆ, ಸಾಧಾರಣ ೨೦-೨೫ ಇಂಚು ಮಳೆ ಬೇಕು. ಜೋಳ, ಗೋದಿ ಬೆಳೆಯುವ ಪ್ರದೇಶದಲ್ಲಿ ಇದು ಬರುತ್ತದೆ. ಕಡಮೆ ಮಳೆ ಬೀಳುವಲ್ಲಿ ನೀರಾವರಿಯಿಂದ ಉದ್ದ ಎಳೆಯ ಹತ್ತಿಯನ್ನು ಬೆಳೆಯಬಹುದು. ಧಾರವಾಡ, ವಿಜಾಪುರ, ಪೂರ್ವಖಾನದೇಶ, ಮತ್ತು ಪಶ್ಚಿಮಖಾನದೇಶ ಜಿಲ್ಲೆಗಳು ಹತ್ತಿಯ ಬೆಳೆಗೆ ಹೆಸರಾಗಿವೆ. ಗುಜರಾತದಲ್ಲಿ ಸುರತ, ಭಡೋಚ, ಅಹಮದಾಬಾದ ಜಿಲ್ಲೆಗಳು ಇದಕ್ಕೆ ಪ್ರಸಿದ್ಧವಾಗಿವೆ. ಹತ್ತಿಯು ಬೆಳೆಯುವ ಉಳಿದ ಪ್ರದೇಶಗಳನ್ನು ನಕಾಶದಿಂದ ನೋಡಿ ತಿಳಿದುಕೊಳ್ಳಿರಿ.

**೭. ಕಬ್ಬು:—** ಭತ್ತದಂತೆ ಇದಕ್ಕೂ ಹೆಚ್ಚು ನೀರು ಮತ್ತು ಉಷ್ಣ ಹವೆಯು ಬೇಕು. ಆದರೆ ಭೂಮಿಯೊಳಗಿನ ನೀರು ಬಸಿದು ಹೋಗುತ್ತಿರಬೇಕು. ಆದ್ದರಿಂದ ಪೂರ್ಣ ಎರೆಗಿಂತ ರೇವೆ, ಅಥವಾ ತುಸು ಉಸುಕು ಕೂಡಿದ ಎರೆ—ಇಲ್ಲವೆ ಮಡಿಕಟ್ಟು ಭೂಮಿಯಲ್ಲಿ ಕಬ್ಬು ಚೆನ್ನಾಗಿ ಬೆಳೆಯುತ್ತದೆ. ಆದರೆ ಭೂಮಿ ಒಳ್ಳೇ ಕಸುವಿನದು ಇರಬೇಕು.

ಅದಕ್ಕಾಗಿ ಭೂಮಿಗೆ ಗೊಬ್ಬರ-ಹಿಂಡಿಗಳನ್ನು ಹಾಕಬೇಕಾಗುತ್ತದೆ! ಇದು ಸಾಧಾರಣ ಒಂದು ವರುಷದ ಬೆಳೆಯಾದ್ದರಿಂದ, ಕೇವಲ ಮಳೆಯ ನೀರಿನಿಂದ ಬೆಳೆ ಬರುವದು ಅತಿ ವಿರಳ. ನೀರಾವರಿಯಿಂದಲೇ ಇದನ್ನು ಬೆಳೆಯಬೇಕು.

ಮುಂಬಯಿ ರಾಜ್ಯ

ಕಬ್ಬು ಬೆಳೆಯುವ ಪ್ರದೇಶ

++++++ ಹೆಚ್ಚು ಬೆಳೆ

_____ ಕಡಿಮೆ ಬೆಳೆ

ಆಕೃತಿ ೧೫.

ಕಬ್ಬಿನ ರಸದಿಂದ ಬೆಲ್ಲವನ್ನು ತಯ್ಯಾರಿಸುತ್ತಾರೆ. ಬೆಳಗಾವಿ ಜಿಲ್ಲೆಯ ಪಶ್ಚಿಮ ಭಾಗ ಮತ್ತು ಕೊಲ್ಹಾಪುರ ಜಿಲ್ಹೆಯ ಎಲ್ಲ ಭಾಗಗಳಲ್ಲಿ ಹುಟ್ಟುವ ಬೆಲ್ಲ ಹೆಸರಾದುದು. ಕಬ್ಬಿನ ರಸದಿಂದ ಉತ್ತಮ ಸಕ್ಕರೆಯೂ ತಯಾರಾಗುತ್ತದೆ. ಕಾಲುವೆಗಳ ನೀರಿನಿಂದ ದೊಡ್ಡ ಪ್ರಮಾಣದಲ್ಲಿ ಕಬ್ಬನ್ನು ಬೆಳೆದು ಸಕ್ಕರೆಯನ್ನು ತಯಾರಿಸುವದು ಬಹಳ ಲಾಭದಾಯಕವಾಗಿದೆ. ಕರ್ನಾಟಕದಲ್ಲಿ ಬೆಳಗಾವಿ, ಧಾರವಾಡ ಜಿಲ್ಲೆಗಳ ಪಶ್ಚಿಮಭಾಗ ಮತ್ತು ಕಾರವಾರ ಜಿಲ್ಲೆಯ ಪೂರ್ವಭಾಗ ಇಲ್ಲಿ ಕಬ್ಬಿನ ಬೆಳೆ ಹೆಚ್ಚು. ಮಹಾರಾಷ್ಟ್ರದಲ್ಲಿ ಖಾನದೇಶ ಜಿಲ್ಹೆಗಳಲ್ಲಿ ಕಬ್ಬು ಕಡಿಮೆ. ಉಳಿದ ಎಲ್ಲ ಜಿಲ್ಹೆಗಳಲ್ಲಿಯೂ ಕಬ್ಬು ಬೆಳೆಯುವದು. ಪುಣೆ, ಅಹಮ್ಮದನಗರ ಜಿಲ್ಹೆಗಳಲ್ಲಿ ನದಿಗಳ ಕಾಲುವೆಗಳು ಹೆಚ್ಚಾಗಿರುವದರಿಂದ, ಈ ಜಿಲ್ಹೆಗಳಲ್ಲಿ ಕಬ್ಬಿನ ಬೆಳೆ ವಿಶೇಷವಾಗಿದೆ. ಗುಜರಾತದಲ್ಲಿ ಕಬ್ಬಿನ ಪಯಿರು ಇಲ್ಲವೆಂದೇ ಹೇಳಬಹುದು.

## ಅಭ್ಯಸನಗಳು

೧. ಮುಂಗಾರಿ, ಹಿಂಗಾರಿ ಬೆಳೆಗಳು ಯಾವವು ?

೨. ಕೆಳಗಿನ ಮಾತುಗಳು ಸರಿ ಅಥವಾ ತಪ್ಪು ಎಂಬುದನ್ನು ಹೇಳಿರಿ.

ಅ. ಎರೆಭೂಮಿಯಲ್ಲಿ ಭತ್ತ ಚೆನ್ನಾಗಿ ಬೆಳೆಯುತ್ತದೆ.

ಬ. ಮಲೆನಾಡಿನಲ್ಲಿ ಜೋಳವು ಬೆಳೆಯುವದಿಲ್ಲ.

ಕ. ಹತ್ತಿಯು ಕೊಂಕಣದಲ್ಲಿ ಹೆಚ್ಚಾಗಿ ಬೆಳೆಯುತ್ತದೆ.

ಡ. ಗೋದಿಯು ಗುಜರಾತದಲ್ಲಿ ಹೆಚ್ಚಿಗೆ ಬೆಳೆಯುತ್ತದೆ.

ಇ. ಸಜ್ಜೆಯು ಚಳಿಗಾಲದ ಬೆಳೆಯು.

೩. ಕೆಳಗೆ ಕೊಟ್ಟ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. ........ದಲ್ಲಿ ದ್ರಾಕ್ಷೆಯನ್ನು ಬೆಳೆಯಿಸುತ್ತಾರೆ.

ಬ. ಅಡಿಕೆಯ ತೋಟಗಳು........ದಲ್ಲಿ ಹೆಚ್ಚಿಗೆ ಕಾಣುತ್ತವೆ.

ಕ. ಡೋಣಿಸಾಲಿನಲ್ಲಿ........ಹೆಚ್ಚಾಗಿ ಬೆಳೆಯುತ್ತದೆ.

ಡ. ಆಪೂಸ ಮಾವಿನ ಹಣ್ಣುಗಳನ್ನು........ಯಲ್ಲಿ ಹೆಚ್ಚಾಗಿ ಬೆಳೆಯಿಸುವರು.

೪. ಕೊಂಕಣದಲ್ಲಿಯ ಮಹತ್ತ್ವದ ಬೆಳೆಗಳು ಯಾವವು ?

## ೮. ಉದ್ಯೋಗಗಳು

ಭೂಮಿ, ಮಳೆ, ಹವೆ ಇವುಗಳ ಮೇಲಿಂದ ಎಲ್ಲಿ ಯಾವ ಬೆಳೆಯನ್ನು ಬೆಳೆಯಬೇಕು ಎಂಬುದನ್ನು ಕಂಡುಕೊಂಡೆವು. ಭೂಮಿಯನ್ನು ಉತ್ತು ಬಿತ್ತಿ ಬೆಳೆಯುವದಕ್ಕೆ **ಬೇಸಾಯ** ಅಥವಾ **ವ್ಯವಸಾಯ** ಎಂದು ಹೆಸರು. ನಮ್ಮ ಹಳ್ಳಿಗಳಲ್ಲಿ ಹೆಚ್ಚು ಜನರು ಯಾವ ಕೆಲಸವನ್ನು ಮಾಡುತ್ತಾರೆ? ಒಕ್ಕಲುತನ (ಬೇಸಾಯ)ವೇ ಮುಂಬಯಿರಾಜ್ಯದಲ್ಲಿ ಜನರ ಮುಖ್ಯ ಉದ್ಯೋಗವಾಗಿದೆ. ಸುಮಾರು ಮುಕ್ಕಾಲುಪಾಲು ಜನರು ಬೇಸಾಯದಿಂದ ಉಪಜೀವಿಸುವರು.

ಹಳ್ಳಿಗಳಲ್ಲಿ ಒಕ್ಕಲುತನಕ್ಕೆ ಸಹಾಯಕವಾದ ಕಮ್ಮಾರಿಕೆ, ಬಡಿಗತನ ಮುಂತಾದ ಕೆಲವು ಕೈಗೆಲಸಗಳಿರುತ್ತವೆ. ಅವುಗಳಿಗೆ **ಕೈಗಾರಿಕೆಗಳು** ಎನ್ನುತ್ತಾರೆ. ರಾಟಿಯಿಂದ ನೂಲುತೆಗೆಯುವದು, ಕೈಮಗ್ಗದ ಮೇಲೆ ಬಟ್ಟೆ ತಯಾರಿಸುವದು, ಕಬ್ಬಿನಿಂದ ಬೆಲ್ಲವನ್ನು ತಯಾರಿಸುವದು— ಇವು ಸಹ ಕೈಗಾರಿಕೆಗಳು. ಹಳ್ಳಿ(ಗ್ರಾಮ)ಗಳಲ್ಲಿ ನಡೆಯುವ ಎಲ್ಲ ಕಸಬು-ಕೈಗಾರಿಕೆಗಳು **ಗ್ರಾಮೋದ್ಯೋಗಗಳು.**

ಈಗ ಎಲ್ಲ ಉದ್ಯೋಗಗಳಲ್ಲಿ ಯಂತ್ರಗಳ ಉಪಯೋಗವು ಹೆಚ್ಚಾಗಿದೆ. ಯಂತ್ರದ ಸಹಾಯದಿಂದ ದೊಡ್ಡ ದೊಡ್ಡ ಗಿರಣಿ-ಕಾರಖಾನೆಗಳನ್ನು ನಡೆಸುತ್ತಾರೆ. 'ಜಿನಿಂಗ್' ಯಂತ್ರದಿಂದ ಹತ್ತಿಯಲ್ಲಿಯ ಕಾಳು ತೆಗೆದು, ಅರಳೆ ಮಾಡುವದು **ಜಿನಿಂಗ್ ಕಾರಖಾನೆ.** ಅರಳೆಯಿಂದ ನೂಲನ್ನು ಮತ್ತು ನೂಲಿನಿಂದ ಬಟ್ಟೆಯನ್ನು ತಯಾರಿಸುವ ದೊಡ್ಡ ಕಾರಖಾನೆಗಳೇ **ಗಿರಣಿಗಳು.** ಒಂದೊಂದು ಬಟ್ಟೆಯ ಗಿರಣಿಯಲ್ಲಿ ಸಾಮಾನ್ಯವಾಗಿ ಸಾವಿರಕ್ಕೆ ಮೇಲ್ಪಟ್ಟು ಜನರು ಕೆಲಸ ಮಾಡುತ್ತಾರೆ. ಈ ಗಿರಣಿಗಳನ್ನು ಕುರಿತು ಕೆಲವು ಸಂಗತಿಗಳನ್ನು ತಿಳಿದುಕೊಳ್ಳುವಾ.

### (ಅ) ಬಟ್ಟೆಯ ಉದ್ಯೋಗ

ಹತ್ತಿಯಲ್ಲಿ ಕಾಳುಗಳಿರುತ್ತವೆ. ಹಿಂದಿನ ಕಾಲದಲ್ಲಿ ಹಳ್ಳಿಯಲ್ಲಿಯೇ ಹೆಣ್ಣುಮಕ್ಕಳು ಕಾಲಿನಿಂದ ಹತ್ತಿಯನ್ನು ಅರೆದು, ಕಾಳು ತೆಗೆದು ಅರಳೆ ಮಾಡುತ್ತಿದ್ದರು. ಮನೆ-ಮನೆಗೂ ಗಂಡಸರು, ಹೆಂಗಸರು ತಮ್ಮ ಬಿಡುವಿನ ವೇಳೆಯಲ್ಲಿ, ಕೈರಾಟಿಯ ಮೇಲೆ ಅರಳೆಯಿಂದ **ನೂಕು** ನೂಲು ತೆಗೆಯುತ್ತಿದ್ದರು. ಆ ನೂಲಿನಿಂದ ನೇಕಾರರು ಕೈಮಗ್ಗಗಳ ಮೇಲೆ ನೆಯ್ದು

ದೋತರ, ಸೀರೆ, ಕುಪ್ಪಸ, ಹಚ್ಚಡ ಮೊದಲಾದ ಎಲ್ಲ ತರದ ಬಟ್ಟೆಯನ್ನು ತಯಾರಿಸುತ್ತಿದ್ದರು. ಹಳ್ಳಿಗಳಲ್ಲಿ ಒಕ್ಕಲುತನದ ತರುವಾಯ ಬಟ್ಟೆಯ ಉದ್ಯೋಗವೇ ಅತಿ ಮಹತ್ತ್ವದ ಉದ್ಯೋಗವಾಗಿತ್ತು.

ಈಗಲೂ ಮುಂಬಯಿರಾಜ್ಯದಲ್ಲಿ ನೇಕಾರಿಕೆಯು ಎರಡನೆಯ ದೊಡ್ಡ ಉದ್ಯೋಗವಾಗಿದೆ. ಆದರೆ ಹತ್ತಿಯನ್ನು ಅರೆದು ಅರಳೆ ಮಾಡುವ ಮತ್ತು ಅರಳೆಯಿಂದ ನೂಲನ್ನು ತಯಾರಿಸುವ ಉದ್ಯೋಗವು ಈಗ ಹಳ್ಳಿಗಳಲ್ಲಿ ವಿಶೇಷವಾಗಿ ನಡೆಯುವದಿಲ್ಲ. ಯಾಕೆಂದರೆ ಹತ್ತಿಪ್ಪತ್ತು ಜನರು ಕೈಯಿಂದ ಮಾಡುವ ಕೆಲಸವನ್ನು ಯಂತ್ರದ ಸಹಾಯದಿಂದ ಒಬ್ಬನೇ ಮಾಡಬಲ್ಲನು; ಇದರಿಂದ



ಆಕೃತಿ ೧೬. ನೂಲಿನ ಗಿರಣಿ

ತಯಾರಿಕೆಯ ವೆಚ್ಚವು ಕಡಮೆಯಾಗುತ್ತದೆ. ಅಲ್ಲದೆ ಯಂತ್ರದ ಮೇಲೆ ಒಳ್ಳೇ ನಯವಾದ ನೂಲು ತಯಾರಾಗುತ್ತದೆ. ಇದೇ ಮೇರೆಗೆ ಕೈಮಗ್ಗದ ಬಟ್ಟೆಗಿಂತ ಗಿರಣಿಯ ಬಟ್ಟೆಯು ಹೆಚ್ಚು ನಯವಾದುದೂ ಕಡಮೆ ವೆಚ್ಚದ್ದೂ ಇರುವದು. ಇದರ ಪರಿಣಾಮವಾಗಿ ಹಳ್ಳಿಯ ಬಟ್ಟೆಯ ಉದ್ಯೋಗಕ್ಕೆ ಪೆಟ್ಟುಬಿದ್ದಿದೆ. ಹಳ್ಳಿಯಲ್ಲಿ ಜನರಿಗೆ ಕೆಲಸವಿಲ್ಲದಂತಾಗಿ, ಅವರು ಹಳ್ಳಿಯನ್ನು ಬಿಟ್ಟು ಗಿರಣಿ-ಕಾರಖಾನೆಗಳು ಇರುವಲ್ಲಿಗೆ ಹೋಗಿ ಕೂಲಿಕಾರರಾಗಿ ದುಡಿಯುತ್ತಾರೆ. ಆದ್ದರಿಂದ ಗಿರಣಿ-ಕಾರಖಾನೆಗಳು ಇದ್ದ ಊರುಗಳು ಬೆಳೆದು ಬಹಳ ದೊಡ್ಡ ಪಟ್ಟಣಗಳಾಗಹತ್ತಿವೆ.

ಮುಂಬಯಿರಾಜ್ಯದಲ್ಲಿ **ಅಹಮದಾಬಾದ, ಮುಂಬಯಿ, ಸೊಲ್ಲಾಪುರ** ಇವು ಬಟ್ಟೆಯ ಗಿರಣಿಗಳ ಕೇಂದ್ರಗಳಾಗಿವೆ. ಅಹಮದಾಬಾದದಲ್ಲಿ ಸುಮಾರು ೭೦ ಬಟ್ಟೆಯ ಗಿರಣಿಗಳಿವೆ. ಮುಂಬಯಿಯಲ್ಲಿ ಸುಮಾರು ೬೫ ಮತ್ತು ಸೊಲ್ಲಾಪುರದಲ್ಲಿ ೧೦ ಬಟ್ಟೆಯ ಗಿರಣಿಗಳು ನಡೆಯುತ್ತವೆ. ಅವುಗಳಲ್ಲಿ ಲಕ್ಷಾವಧಿ ಕೂಲಿಕಾರರು ಕೆಲಸ ಮಾಡುತ್ತಾರೆ. ಇವಲ್ಲದೆ ರೇಶಿಮೆ ಮತ್ತು ಉಣ್ಣೆಯ ಬಟ್ಟೆಯ ಗಿರಣಿಗಳೂ ಮುಂಬಯಿಯಲ್ಲಿ ವಿಶೇಷವಾಗಿವೆ. **ಬಡೋದೆ, ಸುರತ, ಪುಣೆ, ಕೊಲ್ಹಾಪುರ, ಮಾಧವನಗರ, ಗೋಕಾಕ, ಹುಬ್ಬಳ್ಳಿ, ಗದಗು** ಮೊದಲಾದ ನಗರಗಳಲ್ಲಿಯೂ ನೂಲುವ ನೇಯುವ ಗಿರಣಿಗಳು ಇರುತ್ತವೆ. ಆದರೂ ಮುಂಬಯಿಯಲ್ಲಿ ಎಲ್ಲಕ್ಕೂ ಹೆಚ್ಚು ಪ್ರಮಾಣದಲ್ಲಿ ನೂಲು ಮತ್ತು ಬಟ್ಟೆಯು ತಯಾರಾಗುತ್ತವೆ. ಸುಮಾರು ೨ ಲಕ್ಷ ಕೂಲಿಕಾರರು ಮುಂಬಯಿಯ ಗಿರಣಿಗಳಲ್ಲಿ ಕೆಲಸ ಮಾಡುತ್ತಾರೆ. ಇಲ್ಲಿಯೇ ಏಕೆ ಈ ಉದ್ಯೋಗವು ಇಷ್ಟು ಹೆಚ್ಚಾಗಿ ಬೆಳೆದಿದೆ, ನೋಡುವಾ.

## ಮುಂಬಯಿ

ಅರಳೆಯಿಂದ ಬಹಳ ನಯವಾದ ನೂಲನ್ನು ತೆಗೆಯಬೇಕಾದರೆ ಆರ್ದ್ರ-ಹವೆಯು ಇರಬೇಕಾಗುತ್ತದೆ. ಒಣ ಹವೆಯಲ್ಲಿ ನೂಲು ಮೇಲಿಂದ ಮೇಲೆ ಹರಿಯುವದು. ಮುಂಬಯಿಯು ಸಮುದ್ರದಂಡೆಯಲ್ಲಿ ಇರುವದರಿಂದ ಅಲ್ಲಿಯ **ಆರ್ದ್ರ ಹವೆಯು** ನೂಲಿನ ಉದ್ಯೋಗಕ್ಕೆ ಬಹಳ ಅನುಕೂಲವಾಗಿದೆ. ಈ ಸ್ವಾಭಾವಿಕ ಅನುಕೂಲತೆಯು ಅಹಮದಾಬಾದ, ಸೊಲ್ಲಾಪುರ ಮೊದಲಾದ ಬೇರೆ ಪಟ್ಟಣಗಳಲ್ಲಿ ಇಲ್ಲ.

ಹಿಂದಿನ ಕಾಲದಲ್ಲಿ ನಮ್ಮ ದೇಶದಲ್ಲಿ ನೂಲಿನ ಗಿರಣಿಗಳಿರಲಿಲ್ಲ. ಆಗ ನಮ್ಮ ದೇಶದ ಅರಳೆಯು ಮುಂಬಯಿ ಬಂದರದ ಮುಖಾಂತರವಾಗಿಯೇ ಪರದೇಶಗಳಿಗೆ ಹೋಗುತ್ತಿತ್ತು. ಹಡಗು, ನಾವೆಗಳು ಸುರಕ್ಷಿತವಾಗಿ ದಂಡೆಗೆ ಬಂದು ನಿಲ್ಲಲು ಇಲ್ಲಿ ಬಹಳ ಅನುಕೂಲವಾದ ಬಂದರವಿದೆ. ಪರದೇಶದಿಂದ ಬರುವ ಸರಕುಗಳೂ ಮುಂಬಯಿ ಬಂದರದ ಮುಖಾಂತರವೇ ಒಡನಾಡುಗಳಿಗೆ ಹೋಗುತ್ತವೆ. ಆದ್ದರಿಂದ ಮುಂಬಯಿಯು ಬರು-ಹೋಗುವ **ವ್ಯಾಪಾರದ ಕೇಂದ್ರ**ವಾಯಿತು. ಮುಂಬಯಿಯಿಂದ ದೇಶದ ಎಲ್ಲ ಭಾಗಗಳಿಗೆ ಹೋಗಲಿಕ್ಕೂ ಬರಲಿಕ್ಕೂ **ರಾಜಮಾರ್ಗ**ಗಳಾದುವು; **ರೇಲ್ವೆ**ಗಳಾದುವು; ವರ್ತಮಾನವನ್ನು ಕಳುಹಲು **ಅಂಚೆ-ತಂತಿಗಳ** ವ್ಯವಸ್ಥೆಯೂ ಆಯಿತು. ಈಗಂತೂ **ವಿಮಾನ-ರೇಡಿಯೊ**ಗಳ ವ್ಯವಸ್ಥೆಯೂ ಆಗಿದೆ.

ಈ ಅನುಕೂಲತೆಗಳ ಮೂಲಕ ಹತ್ತಿ ಬೆಳೆಯುವ ಗುಜರಾತ, ಮಹಾರಾಷ್ಟ್ರ ಮತ್ತು ಕರ್ನಾಟಕ ಭಾಗಗಳಿಂದ ಮುಂಬಯಿಗೆ ಅರಳೆಯನ್ನು




ಆಕೃತಿ ೧೭.

ಒಯ್ಯಲಿಕ್ಕೆ ಮತ್ತು ಗಿರಣಿಗಳಲ್ಲಿ ತಯಾರಾದ ನೂಲು–ಬಟ್ಟೆಗಳನ್ನು ಆ ಆ ಭಾಗಗಳಿಗೆ ಕಳುಹಲಿಕ್ಕೆ ಬಹಳ ಅನುಕೂಲವಾಯಿತು. ಆದ್ದರಿಂದ

ಶ್ರೀಮಂತರು ಮುಂಬಯಿ ಪಟ್ಟಣಕ್ಕೆ ಹೋಗಿ, ಕೋಟ್ಯವಧಿ ರೂಪಾಯಿಗಳ ಬಂಡವಲು ಹಾಕಿ ಗಿರಣಿಗಳನ್ನು ಸ್ಥಾಪಿಸಿದರು.

ಆಕೃತಿ ೧೮.

ಸಹ್ಯಾದ್ರಿಯಲ್ಲಿ ವಿಪುಲವಾಗಿ ಬೀಳುವ ಮಳೆಯ ನೀರಿನಿಂದ ಮುಂಬಯಿ ಪಟ್ಟಣಕ್ಕೆ ನೀರಿನ ಪೂರಯಿಕೆಯಾಗಿದೆ; ವಿದ್ಯುತ್ತಿನ ಪೂರಯಿಕೆಯೂ ಚೆನ್ನಾಗಿ ಆಗಿದೆ. (ಹೇಗೆ?) ಗಿರಣಿಗಳನ್ನು ನಡೆಸಲಿಕ್ಕೆ

ಇವುಗಳಿಂದ ಬಹಳ ಸಹಾಯವಾಗಿರುವದು. ಅಲ್ಲದೆ ಲಕ್ಷಾವಧಿ ಕೂಲಿಕಾರರೂ, ವ್ಯಾಪಾರ-ಉದ್ಯೋಗಗಳಲ್ಲಿ ತೊಡಗಿದ ಜನರೂ ವಾಸವಾಗಿರಲಿಕ್ಕೆ




ಆಕೃತಿ ೧೯.

ಬಹಳ ಸಹಾಯವಾಗಿದೆ. ಮುಂಬಯಿಯಲ್ಲಿ ಸುಮಾರು ೨೮ ಲಕ್ಷ ಜನರು ವಾಸಿಸುತ್ತಾರೆ.

ಮುಂಬಯಿಪಟ್ಟಣದಲ್ಲಿ ಬರುಹೋಗುವ ಸರಕುಗಳ ವ್ಯಾಪಾರವು ಬಹಳ ವಾಗಿದೆಯೆಂದು ಹೇಳಿತಲ್ಲವೆ? ನಮ್ಮ ದೇಶದಿಂದ ಅರಳಿ, ನೂಲಿನ ಬಟ್ಟೆ, ಎಣ್ಣೆಯ ಕಾಳುಗಳು, ಉಪ್ಪು, ದನಗಳ ಚರ್ಮ, ಮೆಣಸು, ಗೋಡಂಬೆ ಮೊದಲಾದ ವಸ್ತುಗಳು ಪರದೇಶಗಳಿಗೆ ಹೋಗುತ್ತವೆ. ಹೀಗೆ ಸರುಕು-ಗಳನ್ನು ದೇಶದಿಂದ ಹೊರಗೆ ಕಳುಹುವ ವ್ಯವಹಾರಕ್ಕೆ **ನಿರ್ಯಾತ** ಅಥವಾ **ರಫ್ತು** ವ್ಯಾಪಾರವೆನ್ನುತ್ತಾರೆ. ಪರದೇಶಗಳಿಂದ ಯಂತ್ರಗಳು, ಔಷಧ, ಪೆಟ್ರೋಲ್, ಚಿಮಣೀ ಎಣ್ಣೆ, ಗಡಿಯಾರ, ಕಾಗದ ಮುಂತಾದ ವಸ್ತು-ಗಳು ನಮ್ಮ ದೇಶಕ್ಕೆ ಬರುತ್ತವೆ. ಇವುಗಳಿಗೆ **ಆಯಾತ** ಅಥವಾ **ಆಮದು** ವಸ್ತುಗಳು ಎನ್ನುತ್ತಾರೆ. ಇವುಗಳ ವ್ಯಾಪಾರ **ಆಯಾತ** ವ್ಯಾಪಾರ.



ಆಕೃತಿ ೨೦. ಮುಂಬಯಿಯ ವಸ್ತುಸಂಗ್ರಹಾಲಯ

ಮುಂಬಯಿ ಬಹಳ ಸೊಗಸಾದ ಪಟ್ಟಣ. ಅದು ನಮ್ಮ ರಾಜಧಾನಿ. ಅದನ್ನು ನಾವು ನೋಡಬೇಕು. ನಗರದ ತುಂಬ ಆರೇಳು ಅಂತಸ್ತಿನ ಕಟ್ಟಡಗಳಿರುವವು. ಭವ್ಯವಾದ ರೇಲ್ವೆ-ನಿಲ್ದಾಣಗಳು, ನಗರಸಭೆಯ ಕಟ್ಟಡ, ರಾಜಾಬಾಯಿ ಗೋಪುರ, ಹಾಯಕೋರ್ಟು ( ಉಚ್ಚ ನ್ಯಾಯಾಲಯ ), 'ಭಾರತದ ಮಹಾದ್ವಾರ' ಎಂಬ ಕಟ್ಟಡ, ವಸ್ತುಸಂಗ್ರಹಾಲಯ, ಪ್ರಾಣಿ-ಸಂಗ್ರಹಾಲಯ, ವಿಮಾನನಿಲ್ದಾಣ, ಹಡಗುನಿಲ್ದಾಣ (ಬಂದರ)— ಇವೆಲ್ಲ ದರ್ಶನೀಯ ಸ್ಥಳಗಳಾಗಿವೆ. ಅಲ್ಲಿಯ ವಿಶಾಲವಾದ ಹಾಗು ಅಚ್ಚುಕಟ್ಟಾದ ಬೀದಿಗಳ ಮೇಲೆ, ಎರಡು ಅಂತಸ್ತಿನ ಬಸ್ಸುಗಳೂ ವಿದ್ಯುತ್ತಿನ ಸಹಾಯದಿಂದ



ಆಕೃತಿ ೨೧. ಮುಂಬಯಿಯ ಟೌನಹಾಲ್
ರಾಜಾಬಾಯಿ ಗೋಪುರ
(ಬಲಗಡೆ)

ನಡೆಯುವ 'ಟ್ರಾಮ್' ಗಾಡಿಗಳೂ ಎಡೆಬಿಡದೆ ಓಡಾಡುತ್ತಿರುತ್ತವೆ. ಓದಂ ದಿಂದ ಶಾಲೆಗೆ ಹೋಗಿ ಬರುತ್ತಿರುವ ಬಾಲಕರ ಸಂಖ್ಯೆಯಂತೂ ಹೇಳತೀರದು.

**ಅಹಮುದಾಬಾದವು** ಹತ್ತಿ ಬೆಳೆಯುವ ಗುಜರಾತದ ಬಯಲಿನ ಮಧ್ಯ-ದಲ್ಲಿ ನೆಲೆಸಿರುವದು; ಆದ್ದರಿಂದ ಅದು ಮೊದಲಿನಿಂದಲೂ ಹತ್ತಿಯ ವ್ಯಾಪಾರದ ಕೇಂದ್ರವಾಗಿದೆ. ಅಲ್ಲಿಂದ ಪಶ್ಚಿಮಕ್ಕೆ ಸೌರಾಷ್ಟ್ರ, ಉತ್ತರಕ್ಕೆ ರಾಜಸ್ಥಾನ, ದಕ್ಷಿಣಕ್ಕೆ ಮುಂಬಯಿ ಇವೆಲ್ಲ ಕಡೆಗೆ ರೈಲುಮಾರ್ಗಗಳು ಇರುತ್ತವೆ. ಗುಜರಾತದ ಬಯಲಿನ ಹತ್ತಿಯು ಮೊದಲು ಅಹಮುದಾಬಾದಕ್ಕೆ ಬರುತ್ತಿತ್ತು; ಅಲ್ಲಿಯ ಜಿನಿಂಗ್ ಮತ್ತು ಪ್ರೆಸಿಂಗ್ ಕಾರಖಾನೆಗಳಲ್ಲಿ ಅರಳೆಯ ಗಂಟುಗಳು ತಯಾರಾಗಿ ಮುಂಬಯಿಗೆ ಹೋಗುತ್ತಿದ್ದುವು.

ಪಟ್ಟಣದ ಮಗ್ಗುಲಲ್ಲಿಯೇ **ಸಾಬರಮತಿ** ನದಿಯು ಹರಿಯುವದರಿಂದ, ಜನರಿಗೆ ಮತ್ತು ಗಿರಣಿಗಳಿಗೆ ನೀರಿನ ಅನುಕೂಲತೆಯಾಗಿದೆ. ಗುಜರಾತದ ಬಯಲು ಬಹಳ ಬೆಳೆಯುಳ್ಳ ಭೂಮಿಯಾಗಿರುವದರಿಂದ ಹತ್ತಿ, ಗೋದಿ, ಸಜ್ಜಿ, ಜೋಳ ಮುಂತಾದುವು ಹುಲುಸಾಗಿ ಬೆಳೆಯುತ್ತವೆ. ಇದರಿಂದ ಗುಜರಾತದ ಜನರು ಸಿರಿವಂತರಾಗಿದ್ದಾರೆ. ಮೊದಲು ಮುಂಬಯಿಗೆ ಹೋಗಿ ಗಿರಣಿಗಳನ್ನು ಸ್ಥಾಪಿಸಿದವರು ಗುಜರಾತಿಗರೆ. ಮುಂಬಯಿಯಲ್ಲಿ ದೊರೆತ ಅನುಭವ-ಹಣಗಳಿಂದ ಅವರಿಗೆ ತಮ್ಮ ಗುಜರಾತದ ಸೀಮೆಯಲ್ಲಿಯೆ

ಈ ಉದ್ಯೋಗವನ್ನು ಆರಂಭಿಸಲು ಅನುಕೂಲವಾಯಿತು. ಹೀಗೆ ಅಹಮದಾಬಾದದಲ್ಲಿ ನೂಲಿನ ಹಾಗು ಬಟ್ಟೆಯ ಗಿರಣಿಗಳು ಹುಟ್ಟಿಬೆಳೆದುವು.



ಚಿತ್ರ ೩೦.



ಚಿತ್ರ ೨೯. ತಾಜಮಹಾಲ ಹೋಟೆಲ್ ಭಾರತದ ಮಹಾದ್ವಾರ

ಅವುಗಳ ಜೊತೆಗೆ ಪಟ್ಟಣವೂ ಬೆಳೆದು ದೊಡ್ಡದಾಯಿತು. ಈಗ ಇದು ಮುಂಬಯಿರಾಜ್ಯದಲ್ಲಿಯ ಎರಡನೆಯ ದೊಡ್ಡ ಪಟ್ಟಣವಾಗಿದೆ. ಇಲ್ಲಿ ಸುಮಾರು ೮ ಲಕ್ಷ ಜನರು ವಾಸಿಸುತ್ತಾರೆ.

C5794UL

**ಬಡೋದೆ:**— ಇದು ಬಡೋದೆ ಜಿಲ್ಲೆಯ ಮುಖ್ಯಪಟ್ಟಣ. ಮುಂಬಯಿಯಿಂದ ಅಹಮದಾಬಾದಕ್ಕೆ ಹೋಗುವ **ಪಶ್ಚಿಮರೇಲ್ವೆಯ** ಜಂಕ್ಶನ್ ಸ್ಥಳ ಆಗಿದೆ. ಇಲ್ಲಿಂದ ಇನ್ನೊಂದು ರೈಲುಮಾರ್ಗವು ದಿಲ್ಲಿಯ ಕಡೆಗೆ ಹೋಗಿದೆ. ಬಡೋದೆ ಜಿಲ್ಲೆಯು ಹತ್ತಿಯ ಬೆಳೆಗೆ ಹೆಸರಾದದ್ದು. ಬಡೋದೆಯು ಮೊದಲು ಗಾಯಕವಾಡನೆಂಬ ಮರಾಠಾಸಂಸ್ಥಾನಿಕನ ರಾಜಧಾನಿಯಾಗಿತ್ತು; ಆದ್ದರಿಂದ ಇದು ಶ್ರೀಮಂತರ ಪಟ್ಟಣವಾಗಿದೆ; ವ್ಯಾಪಾರದ ಕೇಂದ್ರವೂ ಆಗಿದೆ. ಇವೆಲ್ಲ ಕಾರಣಗಳಿಂದ ಇಲ್ಲಿ ಬಟ್ಟೆಯ ಗಿರಣಿಗಳು ಹುಟ್ಟಿವೆ. ಇಲ್ಲಿಯ ಪ್ರಾಚ್ಯ-ವಸ್ತುಸಂಗ್ರಹಾಲಯ ಹಾಗು ಪ್ರಾಣಿಸಂಗ್ರಹಾಲಯಗಳು ನೋಡತಕ್ಕವಾಗಿವೆ. ಇಲ್ಲಿಯ ಕೆಲವು ರಾಜಬೀದಿಗಳ ಎರಡೂ ಪಕ್ಕಗಳಲ್ಲಿ ಗಿಡಗಳನ್ನು ಬೆಳೆಯಿಸಿರುವುದರಿಂದ, ಅವು ನೋಡಲು ಬಲು ಅಂದವಾಗಿವೆ.

**ಭಡೋಚ:**— ಭಡೋಚದ ಹತ್ತಿಯೆಂದರೆ ಮುಂಬಯಿರಾಜ್ಯದಲ್ಲಿ ಅತ್ಯಂತ ಶ್ರೇಷ್ಠತರಗತಿಯದೆಂದು ತಿಳಿಯುತ್ತಾರೆ. ಎಂದ ಮೇಲೆ ಇಲ್ಲಿ ಬಟ್ಟೆಯ ಗಿರಣಿಯಿರುವದು ಸ್ವಾಭಾವಿಕವಲ್ಲವೇ? ಇಲ್ಲಿಯೂ **ಪಶ್ಚಿಮರೇಲ್ವೆಯು** ಹಾಯ್ದುದೆ. ನರ್ಮದಾನದಿಯು ಖಂಬಾಯತ ಆಖಾತಕ್ಕೆ ಕೂಡುವಲ್ಲಿ ಈ ಪಟ್ಟಣ ನೆಲಸಿದೆ. ಮೊದಲು ಇದು ಒಂದು ಪ್ರಸಿದ್ಧ ಬಂದರವಾಗಿತ್ತು; ಈಗ ಇದರ ಮಹತ್ತ್ವ ಕಡಿಮೆಯಾಗಿದೆ.

**ಸುರತ:**— ಸುರತಜಿಲ್ಲೆಯೂ ಹತ್ತಿಯ ಬೆಳೆಗೆ ಹೆಸರಾಗಿದೆ. ಸುರತ-ಪಟ್ಟಣವು ತಾಪೀನದಿಯ ಮುಖದಲ್ಲಿದೆ. ಇದು ಮೊದಲು ಒಳ್ಳೆಯ ಬಂದರವಾಗಿತ್ತು. ಜರದ ಮತ್ತು ಕುಸುರಿನ ಬಟ್ಟೆಗಳಿಗಾಗಿ ಬಹಳ ಹಿಂದಿನ ಕಾಲ-ದಿಂದಲೂ ಈ ಪಟ್ಟಣವು ಹೆಸರಾಗಿದೆ. ಇಂಗ್ಲಿಷರು ಮೊದಲು ಇಲ್ಲಿಯೇ ತಮ್ಮ ವಖಾರವನ್ನು ಇಟ್ಟು ವ್ಯಾಪಾರ ಸಾಗಿಸಿದರು. **ಪಶ್ಚಿಮರೇಲ್ವೆಯು** ಇಲ್ಲಿ ಹಾಯ್ದಿದೆ. ಆದ್ದರಿಂದ ಈ ಪಟ್ಟಣವು ಬಟ್ಟೆಯ ಉತ್ಪಾದನೆಗೆ ಬಹಳ ಅನುಕೂಲ ಸ್ಥಳವಾಗಿದೆ. ದೊಡ್ಡದೊಂದು ಗಿರಣಿಯಲ್ಲದೆ, ನೂಲು ಹಾಗು ರೇಶಿಮೆಬಟ್ಟೆಯ ಕಾರಖಾನೆಗಳು ಇಲ್ಲಿ ಹೇರಳವಾಗಿವೆ. ಸುರತದ ಮಿಠಾಯಿಗಳೂ ಪ್ರಸಿದ್ಧ. ಸುರತ ಜಿಲ್ಲೆಯ **ನವಸಾರಿ** ಮತ್ತು **ಬಿಲ್ಲಿಮೋರಾ** ಊರುಗಳಲ್ಲಿಯೂ ಬಟ್ಟೆಯ ಗಿರಣಿಗಳಿವೆ.

**ಪುಣೆ :**— ಮುಳಾ, ಮುಠಾ ಎಂಬ ಎರಡು ಚಿಕ್ಕ ನದಿಗಳ ಕೂಡಲ-ದಲ್ಲಿ ಈ ಊರು ನೆಲಸಿದೆ. ಇದು ಮೊದಲು ಮರಾಠರ ಆಳಿಕೆಯಲ್ಲಿ ಪೇಶವೇಯರ ರಾಜಧಾನಿಯಾಗಿತ್ತು. ಆಗಿನಿಂದಲೂ ರೇಶಿಮ್ಮೆ, ಜರದ ವಸ್ತ್ರ ಹಾಗೂ ಹಿತ್ತಾಳೆಯ ಪಾತ್ರೆ-ಇವುಗಳಿಗೆ ಪ್ರಸಿದ್ಧವಾಗಿದೆ. ಇದು ರೈಲು-

ಮಾರ್ಗದ ದೊಡ್ಡ ಜಂಕ್ಶನ್ ಸ್ಥಳವಾಗಿದೆ. **ದಕ್ಷಿಣರೇಲ್ವೆಯ** ಒಂದು ಶಾಖೆಯು ಇಲ್ಲಿಂದಲೇ ದಕ್ಷಿಣಕ್ಕೆ ಬೆಳಗಾಂವಿ-ಹುಬ್ಬಳ್ಳಿಗಳ ಮೇಲಿಂದ ಬೆಂಗಳೂರ ಕಡೆಗೆ ಹೋಗಿದೆ. **ಮಧ್ಯರೇಲ್ವೆಯ** ಒಂದು ಶಾಖೆಯು ಸೊಲ್ಲಾಪುರದ ಮೇಲಿಂದ ಮದ್ರಾಸಿನ ಕಡೆಗೆ ಹೋಗಿದೆ. ಇದೇ ರೇಲ್ವೆಯ ಇನ್ನೊಂದು ಶಾಖೆಯು ಉತ್ತರಕ್ಕೆ **ಲೋನಾವಳ-ಕಲ್ಯಾಣಗಳ** ಮೇಲಿಂದ ಮುಂಬಯಿಗೆ ಹೋಗಿದೆ. ಊರಿಗೆ ನೀರಿನ ಮತ್ತು ವಿದ್ಯುತ್ತಿನ ಪೂರಯಿಕೆ ಚೆನ್ನಾಗಿ ಇದೆ. ಸೊಲ್ಲಾಪುರದ ಕಡೆಯಿಂದ ಅರಳೆಯು ಬರುವದು. ಈ ಕಾರಣಗಳಿಂದ ಪುಣೆಯಲ್ಲಿ ಬಟ್ಟೆಯ ಗಿರಣಿಗಳು ನಡೆದಿರುತ್ತವೆ. ಈ ಪಟ್ಟಣದಲ್ಲಿ ಸುಮಾರು ಐದು ಲಕ್ಷ ಜನರು ವಾಸಿಸುತ್ತಾರೆ. ಇಲ್ಲಿ ಮಿಲಿಟರಿ ಶಿಕ್ಷಣದ ಶಾಲೆ ಇದೆ. ಇಲ್ಲಿಂದ ಹದಿನಾರು ಮೈಲಿನ ಮೇಲೆ **ಖಡಕವಾಸಲಾ** ಎಂಬಲ್ಲಿ, ಮಿಲಿಟರಿ ತರಬೇತಿನ ಕೇಂದ್ರವಿದೆ. ಅದರ ಸಮೀಪದಲ್ಲಿಯೇ ಛತ್ರಪತಿ ಶಿವಾಜಿಯ ಕಾಲದ ಹೆಸರಾದ **ಸಿಂಹಗಡ ಕೋಟೆ** ಇರುವದು.

**ಕೊಲ್ಹಾಪುರ:**— ಇದು ಮೊದಲು ಕೊಲ್ಹಾಪುರ ಸಂಸ್ಥಾನದ ರಾಜಧಾನಿಯಾಗಿತ್ತು. ಸಂಸ್ಥಾನದ ಹಣದ ಸಹಾಯದಿಂದಲೇ ಇಲ್ಲಿ ಗಿರಣಿಯನ್ನು ಪ್ರಾರಂಭಿಸಲು ಅನುಕೂಲವಾಯಿತು. **ದಕ್ಷಿಣರೇಲ್ವೆಯ** ಒಂದು ಶಾಖೆಯು ಮಿರಜದಿಂದ ಕೊಲ್ಹಾಪುರಕ್ಕೆ ಹೋಗಿದೆ. ಬೆಳಗಾವಿ-ದಕ್ಷಿಣಸಾತಾರೆ ಜಿಲ್ಹೆಗಳಲ್ಲಿ ಬೆಳೆಯುವ ಹತ್ತಿಯು ಕೊಲ್ಹಾಪುರಕ್ಕೆ ಹೋಗುತ್ತದೆ. ರತ್ನಾಗಿರಿ ಜಿಲ್ಹೆಯ ಜನರಿಗೆ ಕೊಲ್ಹಾಪುರದಿಂದಲೇ ಬಹಳ ವಸ್ತುಗಳ ಪೂರಯಿಕೆಯಾಗುತ್ತದೆ; ಆದ್ದರಿಂದ ಇದು ವ್ಯಾಪಾರದ ಕೇಂದ್ರವಾಗಿದೆ. ಇಲ್ಲಿಯ **ಅಂಬಾಭವಾನೀ** ದೇವಿಯ ಗುಡಿಯು ನೋಡತಕ್ಕದಾಗಿದೆ.

**ಮಾಧವನಗರ:**— ಇದು ದಕ್ಷಿಣಸಾತಾರಾ ಜಿಲ್ಹೆಯಲ್ಲಿ ದಕ್ಷಿಣರೇಲ್ವೆಯ ಮೇಲಿನ ಸ್ಟೇಶನ್ ಆಗಿದೆ. ಇದಕ್ಕೆ ಮೊದಲು ಬುಧಗಾಂವ ಎಂದು ಹೆಸರಿತ್ತು. ಇಲ್ಲಿ ಒಬ್ಬ ಚಿಕ್ಕ ಸಂಸ್ಥಾನಿಕನು ಇರುತ್ತಿದ್ದನು; ಆತನ ಸಹಾಯದಿಂದ ಇಲ್ಲಿ ಒಂದು ನೂಲಿನ ಸಣ್ಣ ಗಿರಣಿಯು ಆರಂಭವಾಯಿತು. ಇಲ್ಲಿಯ ಗಿರಣಿಗೆ ದಕ್ಷಿಣಸಾತಾರಿ, ಬೆಳಗಾವಿ ಜಿಲ್ಹೆಗಳಿಂದ ಹತ್ತಿಯು ಪೂರಯಿಕೆಯಾಗುವದು. ಮಾಧವನಗರದ ಸಮೀಪದಲ್ಲಿ **ಮಿರಜೆ, ಸಾಂಗ್ಲಿ** ಇವು ದೊಡ್ಡ ಪಟ್ಟಣಗಳಾಗಿರುವವು. ಮಿರಜೆಯು ದಕ್ಷಿಣರೇಲ್ವೆಯ ಮೇಲಿನ ಜಂಕ್ಶನ್ ಸ್ಥಳವಾಗಿರುವದು. ಇಲ್ಲಿಂದ ಕೊಲ್ಹಾಪುರ, ಸಾಂಗಲಿ ಹಾಗು ಬಾರ್ಸಿ ಪಟ್ಟಣಗಳ ಕಡೆಗೆ ಶಾಖಾರೇಲ್ವೆಗಳು ಹೋಗಿರುವವು. ಮಿರಜೆಯು ಆರೋಗ್ಯದ ಸ್ಥಳವೆಂದು ಹೆಸರಾಗಿದೆ.

**ಗೋಕಾಕ:**– ಇದು ಬೆಳಗಾವಿ ಜಿಲ್ಹೆಯಲ್ಲಿದೆ. ಗೋಕಾಕದ ತಡಿಸಿಲಿನಿಂದ ವಿದ್ಯುತ್ತನ್ನು ಹುಟ್ಟಿಸಿ ಅಲ್ಲಿ ಒಂದು ನೂಲಿನ ಗಿರಣಿಯನ್ನು ನಡೆಸಿದ್ದಾರೆಂಬುದು ನಮಗೆ ಗೊತ್ತಾಗಿದೆ. ಬೆಳಗಾವಿ ಜಿಲ್ಹೆಯ ಹತ್ತಿಯು ಈ ಗಿರಣಿಗೆ ದೊರೆಯುವದು. ನೀರಿನ ಮತ್ತು ಅಗ್ಗದರದ ವಿದ್ಯುತ್ತಿನ ಪೂರಯಿಕೆಯಿದೆ. ಕೂಲಿಕಾರರಿಗೆ ಇರಲಿಕ್ಕೆ ಒಳ್ಳೆಯ ಅನುಕೂಲತೆಗಳನ್ನು ಮಾಡಿದ್ದಾರೆ. ಹವೆಯೂ ಆರೋಗ್ಯಕರವಾಗಿದೆ. ದಕ್ಷಿಣ ರೇಲ್ವೆಯ ಮೇಲಿನ 'ಗೋಕಾಕ್ ರೋಡ್' ಸ್ಟೇಶನ್ನು ಸಮೀಪದಲ್ಲಿಯೇ ಇದೆ. ಆದ್ದರಿಂದ, ಇಲ್ಲಿಯ ಗಿರಣಿಯು ಬಹಳ ಲಾಭದಾಯಕವಾಗಿ ನಡೆದಿದೆ. ಸುಮಾರು ನಾಲ್ಕು ಸಾವಿರ ಜನರು ಇದೊಂದೇ ಗಿರಣಿಯಲಿ ಕೆಲಸ ಮಾಡುತಾರೆ. ಗೋಕಾಕಪಟ್ಟಣವು ಈ ಗಿರಣಿಯಿಂದ ನಾಲ್ಕು ಮೈಲಿನ ಅಂತರದಲ್ಲಿ ಇರುವದು. ಅಲ್ಲಿ ಕೈಮಗ್ಗದ ಕೆಲಸವು ಚೆನ್ನಾಗಿ ನಡೆಯುವದು. ಅಲ್ಲಿಯ ಬಣ್ಣದ ಸಾಮಾನುಗಳು ಪ್ರಸಿದ್ಧ.

**ಹುಬ್ಬಳ್ಳಿ:**– ಭಡೋಚದ ಹತ್ತಿಯ ತರುವಾಯ ಧಾರವಾಡ ಜಿಲ್ಹೆಯ ಹತ್ತಿಯು ಹೆಸರಾದುದು. ಹುಬ್ಬಳ್ಳಿಯು ಧಾರವಾಡ ಜಿಲ್ಹೆಯಲ್ಲಿದೆ. ಇಡಿಯ



ಆಕೃತಿ ೫೪. ಹುಬ್ಬಳ್ಳಿಯ ರೈಲುನಿಲ್ದಾಣ

ಕರ್ನಾಟಕದಲ್ಲಿಯೇ ಇದು ದೊಡ್ಡ ಪಟ್ಟಣ. ಸುಮಾರು ಒಂದೂಕಾಲು ಲಕ್ಷ ಜನರು ಇಲ್ಲಿ ವಾಸಿಸುತ್ತಾರೆ. ಇಲ್ಲಿಂದ ಪೂರ್ವಕ್ಕೆ ಗದಗು-ಬಳ್ಳಾರಿಗಳ ಕಡೆಗೆ, ದಕ್ಷಿಣಕ್ಕೆ ಹಾವೇರಿ-ಹರಿಹರಗಳ ಮೇಲಿಂದ ಬೆಂಗಳೂರ ಕಡೆಗೆ, ಮತ್ತು ಉತ್ತರಕ್ಕೆ ಧಾರವಾಡ-ಬೆಳಗಾವಿ-ಮಿರಜಿಗಳ ಮೇಲಿಂದ ಪುಣೆಗೆ ಹೋಗೆ

**ದಕ್ಷಿಣರೇಲ್ವೆಯ** ಶಾಖೆಗಳು ಮೂರು ಕಡೆಗೆ ಹೋಗಿವೆ. ಇಲ್ಲಿರುವ ದಕ್ಷಿಣ ರೇಲ್ವೆಯ ಕಾರಖಾನೆಯಲ್ಲಿ (ವರ್ಕ್‌ಶಾಪ್) ಸಾವಿರಾರು ಜನರು ಕೆಲಸ ಮಾಡುತ್ತಾರೆ. ಇದು ನೋಡುವಂತಹದಿದೆ. ಇಲ್ಲಿಯ ಆರೂಢಸ್ವಾಮಿಯ ಮಠವು ದರ್ಶನೀಯವಾಗಿದೆ. ರತ್ನಾಗಿರಿಜಿಲ್ಲೆಯವರಿಗೆ ಕೊಲ್ಹಾಪುರವು ಮಹತ್ತ್ವದ್ದಾಗಿರುವಂತೆ ಕಾರವಾರ ಜಿಲ್ಲೆಯವರಿಗೆ ಹುಬ್ಬಳ್ಳಿಯು ವ್ಯಾಪಾರದ ಕೇಂದ್ರವಾಗಿದೆ (ಪಡಿಮೂಲೆ). ಹುಬ್ಬಳ್ಳಿಯು ಹತ್ತಿಯ ವ್ಯಾಪಾರಕ್ಕೂ ಹೆಸರಾಗಿದೆ. ಇಲ್ಲಿ ಜಿನಿಂಗ್–ಪ್ರೆಸಿಂಗ್ ಕಾರಖಾನೆಗಳು ೪–೫ ನಡೆಯುತ್ತಿವೆ. ಈಗ ಬಟ್ಟೆಯ ಗಿರಣಿಯು ಒಂದೇ ನಡೆದಿದೆ. ಹಣದ ಸಹಾಯ ದೊರೆತರೆ ಇಲ್ಲಿ ಹೆಚ್ಚು ಗಿರಣಿಗಳನ್ನು ಪ್ರಾರಂಭಿಸಲು ಬಹಳ ಅನುಕೂಲವಿದೆ. ಇಲ್ಲಿಂದ ಏಳು ಮೈಲಿನ ಮೇಲೆ **ನೀರಸಾಗರ** ಎಂಬಲ್ಲಿ ಹಳ್ಳಕ್ಕೆ ಒಡ್ಡು ಕಟ್ಟಿ ನೀರು ಸಂಗ್ರಹಿಸಿರುವರು. ಅಲ್ಲಿಂದ ಹುಬ್ಬಳ್ಳಿ-ಧಾರವಾಡ ಪಟ್ಟಣಗಳಿಗೆ ನೀರನ್ನು ಪೂರಯಿಸುವ ಕಾರ್ಯವು ಪೂರ್ತಿಯಾಗುತ್ತ ಬಂದಿದೆ. ಜೋಗದ ಮ. ಗಾಂಧಿ ವಿದ್ಯುತ್‌ಕೇಂದ್ರದಿಂದ ಈ ಪಟ್ಟಣಕ್ಕೆ ವಿದ್ಯುತ್ತನ್ನು ಪೂರಯಿಸುವ ಕೆಲಸವೂ ನಡೆದಿದೆ.

**ಗದುಗು:**— ಗದುಗು ಪಟ್ಟಣವು ಹತ್ತಿಯ ಹೊಲದಲ್ಲಿಯೇ ನೆಲಸಿದೆ ಎನ್ನಬಹುದು. ಧಾರವಾಡ ಜಿಲ್ಲೆಯ ಹೆಸರಾದ ಹತ್ತಿಯೆಂದರೆ ಗದುಗಿನ ಕಡೆಯದೆ. ಗದುಗು ಹತ್ತಿಯ ವ್ಯಾಪಾರದ ಕೇಂದ್ರವಾಗಿದೆ. ಊರಲ್ಲಿ ೮–೧೦ ಜಿನಿಂಗ್–ಪ್ರೆಸಿಂಗ್ ಕಾರಖಾನೆಗಳಿವೆ. ಊರಿಗೆ ಹೊಂದಿ ರೇಲ್ವೆಸ್ಟೇಶನ್ ಇದೆ. ಇಲ್ಲಿಂದ ದಕ್ಷಿಣರೇಲ್ವೆಯ ಒಂದು ಶಾಖೆಯು ಬದಾಮಿ-ಬಾಗಿಲಕೋಟೆ, ವಿಜಾಪುರಗಳ ಮೇಲಿಂದ ಸೊಲ್ಲಾಪುರಕ್ಕೆ ಹೋಗಿದೆ. ಈಗ ಇಲ್ಲಿ ಒಂದೇ ನೂಲಿನ ಗಿರಣಿ ಇದೆ; ಆದರೆ ಹೆಚ್ಚು ಗಿರಣಿಗಳನ್ನು ಆರಂಭಿಸಲು ಇದು ಬಹಳ ಅನುಕೂಲ ಸ್ಥಳವಾಗಿದೆ. ಇಲ್ಲಿಯ ಹಳೆಯ ಕಾಲದ ವೀರನಾರಾಯಣ ಗುಡಿಯು ನೋಡತಕ್ಕದಾಗಿದೆ.

**ಸೊಲ್ಲಾಪುರ:**— ಇದು ಪುಣೆಯಿಂದ ಹೈದರಾಬಾದು ಮತ್ತು ಮದ್ರಾಸುಗಳ ಕಡೆಗೆ ಹೋಗುವ **ಮಧ್ಯರೇಲ್ವೆಯ** ಮೇಲೆ ಇದೆ. ಸೊಲ್ಲಾಪುರದಿಂದ **ದಕ್ಷಿಣರೇಲ್ವೆಯ** ಒಂದು ಶಾಖೆಯು, ವಿಜಾಪುರ-ಬಾಗಿಲಕೋಟೆಗಳ ಮೇಲಿಂದ ಗದುಗಿಗೆ ಹೋಗಿದೆ. ಆದ್ದರಿಂದ ವಿಜಾಪುರ, ಸೊಲ್ಲಾಪುರ ಜಿಲ್ಲೆಗಳಲ್ಲಿ ಬೆಳೆಯುವ ಹತ್ತಿಯನ್ನು ಸೊಲ್ಲಾಪುರಕ್ಕೆ ತರಲು ಬಹಳ ಅನುಕೂಲವಾಗಿದೆ. ಹೈದರಾಬಾದ ರಾಜ್ಯದ ಕೆಲವೊಂದು ಪ್ರದೇಶಕ್ಕೆ ಸೊಲ್ಲಾಪುರವು ಒಳ್ಳೆಯ ಪಡಿಮೂಲೆಯ ಪೇಟೆಯಾಗಿದೆ.

ಇಲ್ಲಿ ಕೈಮಗ್ಗದ ಉದ್ಯೋಗವೂ ದೊಡ್ಡ ಪ್ರಮಾಣದಿಂದ ಸಾಗುತ್ತಿದೆ. ಸುಮಾರು ೧೧,೦೦೦ ಮಗ್ಗಗಳು ಸೀರೆ, ದೋತರ, ಚಾದರ ಮೊದಲಾದ ಬಟ್ಟೆಗಳನ್ನು ತಯಾರಿಸುತ್ತಿವೆ. ಸೊಲ್ಲಾಪುರ ಜಿಲ್ಹೆಯ ಕೆಲವು ಊರುಗಳಲ್ಲಿಯೂ, ವಿಜಾಪುರ ಜಿಲ್ಹೆಯಲ್ಲಿಯೂ ಕೈಮಗ್ಗದ ಉದ್ಯೋಗವು ಬಹಳ ದೊಡ್ಡ ಪ್ರಮಾಣದಿಂದ ನಡೆಯುತ್ತಿದೆ. ಈ ಕೈಮಗ್ಗಗಳಿಗೆ ಸೊಲ್ಲಾಪುರದ ಗಿರಣಿಗಳಿಂದ ನೂಲಿನ ಪೂರಯಿಕೆಯಾಗುತ್ತಿದೆ.

ಇಲ್ಲಿಯ ಹವೆಯು ಆರೋಗ್ಯಕರವಾಗಿದ್ದು, ಜನರು ವಾಸವಾಗಿರಲಿಕ್ಕೆ ಅನುಕೂಲವಾಗಿದೆ. ಮೇಲಾಗಿ ವಿಜಾಪುರ-ಸೊಲ್ಲಾಪುರ ಜಿಲ್ಹೆಗಳಲ್ಲಿ ಮೇಲಿಂದ ಮೇಲೆ ಬರಬೀಳುವದರಿಂದ, ಅಗ್ಗ ಕೂಲಿಯಿಂದ ಗಿರಣಿಯಲ್ಲಿ ಕೆಲಸ ಮಾಡಲು ಬೇಕಾದಷ್ಟು ಜನರು ಸಿಕ್ಕುವರು. ಇವೆಲ್ಲ ಕಾರಣಗಳಿಂದ ಸೊಲ್ಲಾ-ಪುರದಲ್ಲಿ ಗಿರಣಿಗಳು ಹೆಚ್ಚಾಗಿ ನಡೆದಿರುತ್ತವೆ. ಇಲ್ಲಿಯ ಶ್ರೀ ಸಿದ್ಧರಾಮೇಶ್ವರ ದೇವಾಲಯವು ಒಂದು ವಿಶಾಲವಾದ ಕೆರೆಯ ಮಧ್ಯದಲ್ಲಿದ್ದು, ನೋಡಲು ಬಹಳ ರಮಣೀಯವಾಗಿದೆ. ಸಂಕ್ರಾಂತಿಯ ಕಾಲಕ್ಕೆ ಇಲ್ಲಿ ದೊಡ್ಡ ಜಾತ್ರೆ ನೆರೆಯುವದು.

## (ಆ) ಸಕ್ಕರೆಯ ಕಾರಖಾನೆಗಳು

ನಾವು ಬೆಳೆದ ಹತ್ತಿಯು ಹೇಗೆ ಮತ್ತು ಎಲ್ಲಿ ಎಲ್ಲಿ ಉಪಯೋಗವಾಗುತ್ತದೆ—ಎಂಬುದನ್ನು ನಾವು ತಿಳಿದುಕೊಂಡೆವು. ಅದರಂತೆ ಈಗ ಕಬ್ಬಿನಿಂದ ಸಕ್ಕರೆಯನ್ನು ತಯಾರಿಸುವ ಕಾರಖಾನೆಗಳು ಎಲ್ಲೆಲ್ಲಿ ಇರುತ್ತವೆ ಎಂಬುದನ್ನು ತಿಳಿದುಕೊಳ್ಳೋಣ.

ಒಂದು ಸಕ್ಕರೆಯ ಕಾರಖಾನೆಯು ನಡೆಯಬೇಕಾದರೆ, ಅದರ ಸಮೀಪದಲ್ಲಿ ಸಾವಿರಾರು ಎಕರೆ ಕಬ್ಬಿನ ಪಯಿರು ಇರಬೇಕಾಗುತ್ತದೆ. ಅಲ್ಪಸ್ವಲ್ಪ ಕಬ್ಬು ಬೆಳೆಯುವ ಪ್ರದೇಶದಲ್ಲಿ ಕಾರಖಾನೆಯು ನಡೆಯಲಾರದು. ಅಂತಹ ಪ್ರದೇಶದಲ್ಲಿ ಬೆಲ್ಲವನ್ನು ತಯಾರಿಸುವದೇ ಒಳ್ಳೆಯದು.

ಕಪ್ಪಲಿಯಿಂದ ಬಾವಿಯ ನೀರನ್ನು ಪೂರಯಿಸಿ ಕಬ್ಬು ಬೆಳೆಸುವದು ವೆಚ್ಚದ ಕೆಲಸ. ನದಿ-ಹಳ್ಳಗಳ ಕಾಲುವೆಗಳಿಂದ ಇಲ್ಲವೆ ನದಿಗಳಿಗೆ ಪಂಪುಕೂಡಿಸಿ ಕಬ್ಬಿನ ಬೆಳೆಗೆ ಕೊಡುವದು ಹೆಚ್ಚು ಲಾಭದಾಯಕ; ಹೆಚ್ಚು ಭೂಮಿಯಲ್ಲಿ ಬೆಳೆ-ಯನ್ನು ತೆಗೆಯಲೂ ಅನುಕೂಲವಾಗುವದು. ಈ ಕಾರಣದಿಂದ ಸಕ್ಕರೆಯ ಕಾರ-ಖಾನೆಗಳು ಕಾಲುವೆಗಳಿರುವ ಪ್ರದೇಶದಲ್ಲಿ ಹಾಗೂ ನದಿಯ ದಂಡೆಗಳಲ್ಲಿ ಇರುವದು ಸ್ವಾಭಾವಿಕ. ಆದರೆ ರೇಲ್ವೆಸ್ಟೇಶನ್ ಸಹ ಕಾರಖಾನೆಗೆ ಸಮೀಪದಲ್ಲಿರಬೇಕು. ( ಯಾಕೆ? )

ಅಹಮ್ಮದನಗರ ಜಿಲ್ಹೆಯಲ್ಲಿ ಗೋದಾವರಿ, ಪ್ರವರಾ ನದಿಗಳ ಕಾಲುವೆಗಳು ಬಹಳ ಕಡೆಗೆ ಪಸರಿಸಿರುತ್ತವೆ. ಆದ್ದರಿಂದ ಅಲ್ಲಿಯೇ ಸಕ್ಕರೆಯ ಕಾರಖಾನೆಗಳು ಹೆಚ್ಚಾಗಿವೆ. **ಹರೇಗಾಂವ, ಶ್ರೀರಾಮಪುರ, ಪುಣತಾಂಬೆ, ಸಾಖರವಾಡಿ, ಟಿಳಕನಗರ, ಬೆಳವಂಡಿ, ಲಕ್ಷ್ಮೀವಾಡಿ, ಲೋಣಿ** ಈ ಊರುಗಳಲ್ಲಿ ಒಂದೊಂದು ಕಾರಖಾನೆ ಇವೆ. ಈ ಜಿಲ್ಹೆಯಲ್ಲಿ **ಮಧ್ಯರೇಲ್ವೆಯ** ಒಂದು



ಆಕೃತಿ ೩೫. ಕಬ್ಬಿನ ಪಯಿರು

ಶಾಖೆಯು **ದೌಂಡ್-ಮನಮಾಡ**ಗಳ ನಡುವೆ ದಕ್ಷಿಣೋತ್ತರವಾಗಿ ಹೋಗಿದೆ. ಸಕ್ಕರೆಯನ್ನು ಪರಸ್ಥಳಗಳಿಗೆ ಕಳುಹಲು ಇದರಿಂದ ಅನುಕೂಲವಾಗಿದೆ.

ಪುಣೆ ಜಿಲ್ಹೆಯ **ವಾಲಚಂದನಗರ,** ನಾಸಿಕ ಜಿಲ್ಹೆಯ **ರಾವಳಗಾಂವ,** ಸಾತಾರೆ ಜಿಲ್ಹೆಯ **ಫಲಟನ** ಈ ಊರುಗಳಲ್ಲಿಯೂ ಸಕ್ಕರೆಯ ಕಾರಖಾನೆಗಳು ನಡೆದಿರುತ್ತವೆ.

ಕೊಲ್ಹಾಪುರದಲ್ಲಿ ಒಂದು ಸಕ್ಕರೆಯ ಕಾರಖಾನೆಯಿದೆ. ಇಲ್ಲಿಯ ಭೂಮಿಯು ಒಳ್ಳೆಯದಿದ್ದು ವಾರಣಾನದಿಯಿಂದ ನೀರಿನ ಪೂರಯಿಕೆಯಾಗಿದೆ. ಕೊಲ್ಹಾಪುರವು ರೇಲ್ವೆ ಸ್ಟೇಶನ್ನೂ ಆಗಿದೆ.

ಬೆಳಗಾವಿ ಜಿಲ್ಹೆಯಲ್ಲಿ ಕೃಷ್ಣಾತೀರದ **ಉಗಾರ** ಮತ್ತು ಕಿತ್ತೂರುಗಳಲ್ಲಿ ಸಕ್ಕರೆಯ ಕಾರಖಾನೆಗಳಿವೆ. ಕೃಷ್ಣಾ ದಂಡೆಯ ರೇವೆಯ ಮಣ್ಣು ಕಬ್ಬಿನ ಬೆಳೆಗೆ ಬಹಳ ಅನುಕೂಲವಾಗಿದೆ. ಕೃಷ್ಣಾನದಿಗೆ ಪಂಪು ಕೂಡಿಸಿ ನೀರಿನ ಅನುಕೂಲತೆಯನ್ನು ಮಾಡಿಕೊಂಡಿದ್ದಾರೆ. ದಕ್ಷಿಣರೇಲ್ವೆಯ ಮೇಲಿನ **ಕುಡಚಿ** ಮತ್ತು **ಉಗಾರ** ಸ್ಟೇಶನುಗಳು ಸಮೀಪದಲ್ಲಿಯೇ ಇರುವವು.

### ಅಭ್ಯಸನಗಳು

೧. ಮುಂಬಯಿ ರಾಜ್ಯದಲ್ಲಿಯ ಜನರ ಮಹತ್ತ್ವದ ಉದ್ಯೋಗಗಳು ಯಾವವು ?

೨. ಬಟ್ಟೆಯ ಉದ್ಯೋಗದ ಬಗೆಗೆ ಹೆಸರಾದ ಪಟ್ಟಣಗಳಾವವು ?

೩. ಮುಂಬಯಿ ಪಟ್ಟಣವು ಬಟ್ಟೆಯ ಉದ್ಯೋಗದ ಬಗೆಗೆ ಏಕೆ ಹೆಸರಾಗಿದೆ?

೪. ಕೆಳಗಿನ ಮಾತುಗಳು ಸರಿ ಅಥವಾ ತಪ್ಪು ಎಂಬುದನ್ನು ಹೇಳಿರಿ.

(ಅ) ಸೊಲ್ಲಾಪುರದಲ್ಲಿ ಸಕ್ಕರೆಯ ಕಾರಖಾನೆ ಇದೆ.

(ಬ) ದೇಶದಲ್ಲಿಯ ಜನರ ಮುಖ್ಯ ಉದ್ಯೋಗವು ಮೀನು ಹಿಡಿಯುವದು.

(ಕ) ಗೋಕಾಕದ ಹತ್ತಿರ ನೂಲುವ ಗಿರಣಿಯು ಇದೆ.

(ಡ) ಸಾಖರವಾಡಿಯಲ್ಲಿ ನೇಯುವ ಗಿರಣಿ ಇದೆ.

(ಇ) ಹುಬ್ಬಳ್ಳಿಯಲ್ಲಿ ನೂಲುವ ಮತ್ತು ನೇಯುವ ಗಿರಣಿಗಳು ಇವೆ.

೫ ಳಗೆ ಒಂದು ಬದಿಗೆ ಕೆಲವು ಪಟ್ಟಣಗಳನ್ನೂ ಮತ್ತೊಂದು ಬದಿಗೆ ಅವು ಳ ಮಹತ್ತ್ವವನ್ನೂ ಕೊಟ್ಟಿದೆ. ಅವುಗಳನ್ನು ಸರಿಯಾಗಿ ಹೊಂದಿಸಿರಿ.

| | | |
|---|---|---|
| ೧. | ಸುರತ | ಮಿಲಿಟರಿ ತರಬೇತಿಯ ಕೇಂದ್ರ. |
| ೨. | ಪುಣೆ | ಜರದ ಮತ್ತು ಕುಸುರಿನ ಬಟ್ಟೆಗಳು ಪ್ರಸಿದ್ಧ. |
| ೩. | ಕೊಲ್ಹಾಪುರ | ರೇಲ್ವೆ ಜಂಕ್ಶನ್ ಇದೆ. |
| ೪. | ಖಡಕವಾಸಲಾ | ಅಂಬಾಭವಾನಿಯ ಗುಡಿಯು ಇದೆ. |

---

## ೯. ಜನಜೀವನ

ವಿದ್ಯಾರ್ಥಿಗಳೆ, ಈ ವರೆಗೆ ನಾವು ಮುಂಬಯಿ ರಾಜ್ಯದ ಭೂಮಿ, ಹವೆ, ಮಳೆ, ಬೆಳೆ ಮತ್ತು ಮುಖ್ಯ ಉದ್ಯೋಗಗಳ ಬಗೆಗೆ ತಿಳಿದುಕೊಂಡೆವು. ಇವೆಲ್ಲವೂ ನಮ್ಮ ಇರುವಿಕೆಯ ಮೇಲೆ ಹೇಗೆ ಪರಿಣಾಮವನ್ನು ಮಾಡಿವೆ-ಯೆಂಬುದನ್ನು ಇನ್ನು ತಿಳಿದುಕೊಳ್ಳೋಣ.

ಭೂಗುಣ, ಹವೆ, ಮಳೆ ಅವುಗಳ ಮೇಲಿಂದ ಮುಂಬಯಿ ರಾಜ್ಯದಲ್ಲಿ ನಾವು ಸ್ಥೂಲಮಾನದಿಂದ ಐದು ವಿಭಾಗಗಳನ್ನು ಮಾಡಬಹುದು:—

ಗುಜರಾತದ ಬಯಲು, ಕೊಂಕಣ, ಮಲೆನಾಡು, ಮಲೆನಾಡಸೆರಗು, ಹಾಗು ಬಯಲುಸೀಮೆ.

## (ಅ) ಗುಜರಾತಿಗರು

ಗುಜರಾತದ ಬಯಲಿನ ಬಗೆಗೆ ಈ ಸಂಗತಿಗಳು ಗೊತ್ತಾಗಿವೆ :

ಭೂಮಿ:— ಮೇಲಾದ ಎರೆ ಮತ್ತು ರೇವೆಮಣ್ಣಿನದು—ಬಹಳ ಫಲವತ್ತಾಗಿದೆ. ಗುಡ್ಡಗಳು ಇಲ್ಲ.

ಹವೆ:— ವಿಷಮವಾಗಿದ್ದು ಉಷ್ಣ ಹಾಗು ಒಣದಾಗಿದೆ; ಆದ್ದರಿಂದ ಆರೋಗ್ಯಕರವಾದುದು.

ಮಳೆ:— ಸಾಧಾರಣ.

ಬೆಳೆಗಳು:- ಸಜ್ಜೆ, ಜೋಳ, ಗೋದಿ, ಹತ್ತಿ ಇವು ಫಲವತ್ತಾಗಿ ಬೆಳೆಯುತ್ತವೆ.



ಆಕೃತಿ ೨೬. ಗುಜರಾತದ ಒಕ್ಕಲಿಗ

ಗುಜರಾತದಲ್ಲಿ ಮನೆಕಟ್ಟಲಿಕ್ಕೆ ಸಮೀಪದಲ್ಲಿ ಕಲ್ಲು ಸಿಗುವದಿಲ್ಲ. ಆದ್ದರಿಂದ ಹೆಚ್ಚಾಗಿ ಮಣ್ಣು ಮತ್ತು ಇಟ್ಟಂಗಿಗಳಿಂದ ಇಲ್ಲಿಯ ಜನರು ಮನೆಗಳನ್ನು ಕಟ್ಟಿಕೊಳ್ಳುತ್ತಾರೆ. ಹವೆಯು ಉಷ್ಣ ಹಾಗೂ ವಿಷಮವಾಗಿರುವದು. ಮಳೆ ಸಾಧಾರಣ; ಆದ್ದರಿಂದ ಮಾಳಿಗೆಯ ಮನೆಗಳೇ ಹೆಚ್ಚು, ಜನರ ಮೈಬಣ್ಣ ನಸುಗೆಂಪು. ಮುಖ್ಯ ಆಹಾರ–ಸಜ್ಜೆ ಮತ್ತು ಗೋದಿ. ಹೈನವೂ ಹೆಚ್ಚು. ಆರೋಗ್ಯಕರವಾದ ಹವೆಯಿರುವದರಿಂದ, ಜನರು ಗಟ್ಟಿಗರಾಗಿರುತ್ತಾರೆ.

ಒಕ್ಕಲುತನವೇ ಇವರ ಮುಖ್ಯ ಉದ್ಯೋಗವಾಗಿದೆ. ಫಲವತ್ತಾದ ಭೂಮಿಯಿಂದ ಸಮೃದ್ಧವಾದ ಬೆಳೆಯು ಬರುತ್ತದೆ. ಆದ್ದರಿಂದ ಜನರು ಉಂಡುಟ್ಟು ಸುಖದಿಂದ ಇರುವರು. ಗುಜರಾತಿಗರು ಉದ್ಯೋಗಪ್ರಿಯರು; ಹಿಡಿದ ಕೆಲಸವನ್ನು ಮಾಡಿಯೇ ತೀರಬೇಕೆನ್ನುವ ಜಿಗುಟುತನ ಇವರಲ್ಲಿ ಹೆಚ್ಚಾಗಿರುತ್ತದೆ. ಈ ಗುಣಗಳ ಮೂಲಕ ಗುಜರಾತೀ ವ್ಯಾಪಾರಿಗಳು ದೂರ–ದೂರದ ಸ್ಥಳಗಳಿಗೆ ಹೋಗಿ, ಸಾಹಸಪಟ್ಟು ವ್ಯಾಪಾರ–ಉದ್ಯೋಗಗಳನ್ನು ಮಾಡುವದು ಕಂಡುಬರುತ್ತದೆ. ಒಂದಿಲ್ಲೊಂದು ಉದ್ಯೋಗ-ವ್ಯವಹಾರ ಮಾಡಿ ಇವರು ಕೈತುಂಬ ಹಣ ಗಳಿಸುವರು. ಆದ್ದರಿಂದ ದಾನ–ಧರ್ಮಗಳಿಗಾಗಿ ಹೆಚ್ಚಿಗೆ ಹಣವನ್ನು ಕೊಡುವ ಉದಾರಸ್ವಭಾವವು ಇವರಲ್ಲಿ ಕಂಡುಬರುವದು.

### ಅಭ್ಯಸನಗಳು

೧. ಗುಜರಾತದ ಮುಖ್ಯ ಬೆಳೆಗಳು ಯಾವವು ?
೨. ಗುಜರಾತಿಗರ ಮನೆಗಳು ಎಂತಹವು ಮತ್ತು ಏಕೆ ?
೩. ಗುಜರಾತಿಗರ ಮುಖ್ಯ ಉದ್ಯೋಗಗಳು ಯಾವವು ?

---

## (ಆ) ಕೊಂಕಣಿ ಜನರು

ಕೊಂಕಣಕ್ಕೆ ಸಂಬಂಧಿಸಿದ ಸಂಗತಿಗಳು ಯಾವವು ?

**ಭೂಮಿ:**— ಉಸುಕಿನದು, ನಿಃಸತ್ತ್ವವಾದುದು. **ಬೆಳೆ ಚೆನ್ನಾಗಿಬರುವದಿಲ್ಲ** (ಠಾಣೆ ಜಿಲ್ಲೆಯ ಭೂಮಿ ತುಸು ನೆಟ್ಟಗೆ). **ಹವೆ:**– ಉಷ್ಣ ಹಾಗೂ ಆರ್ದ್ರ-ವಾಗಿದೆ; ಆರೋಗ್ಯಕರವಲ್ಲ. **ಮಳೆ:**– ಮುಂಗಾರಿಯಲ್ಲಿ ವಿಪರೀತ ಮಳೆ ಬೀಳುವದು; ಹಿಂಗಾರಿ ಮಳೆ ಆಗುವದೇ ಇಲ್ಲ. **ಬೆಳೆಗಳು:**–ಭತ್ತ, ರಾಗಿ, ಮತ್ತು ತೆಂಗು. **ಕರಾವಳಿ:**– ಸಮುದ್ರದ ದಂಡೆಗುಂಟ ಹಾಗೂ ಒತ್ತುಗಳಲ್ಲಿ ವಿಪುಲವಾಗಿ **ಮೀನುಗಳು** ಸಿಗುತ್ತವೆ. ಉಪ್ಪನ್ನು ತಯಾರಿಸಲು ಅನುಕೂಲವಿದೆ.

ಕೊಂಕಣದ ಒಕ್ಕಲಿಗನಿಗೆ ಸ್ವಂತದ ಭೂಮಿ ಇರುವದಿಲ್ಲ. ಬಡ-ಭೂಮಿಯಲ್ಲಿ ಬರುವ ಸ್ವಲ್ಪ ಬೆಳೆಯಲ್ಲಿ ಒಡೆಯನ ಪಾಲು ಹೋಗಬೇಕು. ಉಳಿದುದರಲ್ಲಿ ಈತನ ಹೊಟ್ಟೆ ಸಾಗಬೇಕು. ಮಳೆ ನಿಂತಮೇಲೆ ಭೂಮಿ-ಯಲ್ಲಿ ಹುಲ್ಲು ಕಡ್ಡಿ ಸಹ ಬೆಳೆಯುವದಿಲ್ಲ. ಆಗ ರೈತರಿಗೆ ಕೆಲಸವೇ ಇರು-ವದಿಲ್ಲ. ಇದರಿಂದ ಇಲ್ಲಿಯ ರೈತರ ಜೀವನ ಬಹಳ ಕಷ್ಟಮಯವಾಗಿದೆ.

ಕೊಂಕಣದ ಒಕ್ಕಲಿಗರ ಚಿತ್ರವನ್ನು ನೋಡಿರಿ. ಇವರು ವಾಸಿಸುವದು ಹೆಚ್ಚಾಗಿ ಗುಡಿಸಿಲುಗಳಲ್ಲಿಯೇ. ಬಹಳ ಮಳೆಯಾಗುವದರಿಂದ ಮಣ್ಣಿನ ಮನೆಗಳಿಗೆ ಸಹ ಬಹಳ ಇಳಿಜಾರಾದ ಚಪ್ಪರಗಳನ್ನು ಹಾಕುತ್ತಾರೆ. ರಾಗಿಯ ರೊಟ್ಟಿ, ಅಕ್ಕಿಯ ಗಂಜಿ, ಅನ್ನ ಮತ್ತು ಮೀನು ಇವೇ ಸಾಮಾನ್ಯವಾಗಿ ಈ ಜನರ ಆಹಾರವಾಗಿವೆ. ಕೊಂಕಣದಲ್ಲಿ ಹೈನವು ತೀರ ಕಡಮೆ. ಅನ್ನದ ಸಂಗಡ ತುಸು ಮಜ್ಜಿಗೆ ಸಿಕ್ಕರೆ ಇವರಿಗೆ ಬಹಳ ಹಿಗ್ಗು. ಊಟದಲ್ಲಿ ಕೊಬ್ಬರಿಯನ್ನು ಉಪಯೋಗಿಸುವದು ಹೆಚ್ಚು.



ಆಕೃತಿ ೨೭. ಕೊಂಕಣದ ಒಕ್ಕಲಿಗರು

ಉಷ್ಣ ಹಾಗೂ ಆರ್ದ್ರ ಹವೆಯ ಮೂಲಕ ಮೈ ಹೆಚ್ಚಾಗಿ ಬೆವರುವದು; ಶರೀರದೊಳಗಿನ ಉತ್ಸಾಹ ಕುಂದುವದು; ಮೈಮೇಲೆ ಬಟ್ಟೆಗಳೂ ಬೇಡವೆನಿಸುವದು. ಆದ್ದರಿಂದ, ಒಂದೇಸವನೆ ಸುರಿಯುವ ಮಳೆಯಲ್ಲಿಯೂ ಇವರು ಬರಿಮೈಯಿಂದಲೇ ಕೆಲಸ ಮಾಡುವರು. ಹವೆಗೆ ಮೈಯೊಡ್ಡಿ ಇರುವದರಿಂದ ಮೈ ಕುಂದಿ ಹೋಗುವದು. ಮೈಕಟ್ಟು ಬಡಕಲು; ನಿಲುವಿಕೆ ಸಾಧಾರಣ; ಶಕ್ತಿಗಿಂತ ಯುಕ್ತಿಯಿಂದಲೆ ಕೆಲಸಮಾಡುವ ಸ್ವಭಾವ ಇವರಲ್ಲಿ ಕಂಡುಬರುವದು.

ಭತ್ತದ ನಿಃಸತ್ತ್ವವಾದ ಹುಲ್ಲಿನ ಹೊರತು ದನಗಳಿಗೆ ಮತ್ತೇನೂ ಸಿಗುವದಿಲ್ಲ; ಆದ್ದರಿಂದ ಇಲ್ಲಿ ದನಗಳು ಬದುಕುವದು, ಕಷ್ಟ. ಅದಕ್ಕಾಗಿ

ಬಡರೈತರು ಬೇಸಾಯದ ಕೆಲಸಗಳನ್ನು ಸಹ, ದನಗಳಿಲ್ಲದೆ ಕೈಯಿಂದಲೇ ಮಾಡಿಕೊಳ್ಳುವದು ಕಂಡುಬರುವದು.

ಸಮುದ್ರದ ದಂಡೆಯ ಪ್ರದೇಶದಲ್ಲಿ ಬೆಸ್ತರು ವಾಸಿಸುತ್ತಾರೆ. ಮಹಾರಾಷ್ಟ್ರದಲ್ಲಿ ಇವರಿಗೆ ಕೋಳೀ ಜನರೆಂದು ಹೆಸರು. ಮೀನು ಹಿಡಿಯುವದು




ಆಕೃತಿ ೨೮. ಕೊಂಕಣದ ಮೀನುಗಾರರು

ಇವರ ಮುಖ್ಯ ಉದ್ಯೋಗ. ಕೆಲವರು ಸಾಗಾಟದ ನಾವೆ-ಹಡಗುಗಳ ಮೇಲೆ ಕೆಲಸಮಾಡುವರು. ಇವರ ಇರುವಿಕೆಯೂ ಒಕ್ಕಲಿಗರಂತೆಯೆ.

ಒಟ್ಟಿನಲ್ಲಿ ಕೊಂಕಣೀ ಜನರ ಜೀವನ ಕಷ್ಟದ್ದಾಗಿದೆ. ಒಕ್ಕಲುತನ, ಮತ್ತು ಮೀನುಹಿಡಿಯುವದರಿಂದ ಹೊಟ್ಟೆ ತುಂಬುವದಿಲ್ಲ; ಆದ್ದರಿಂದ ಬಹಳ ಜನರು ಮುಂಬಯಿಯಂತಹ ದೊಡ್ಡ ಪಟ್ಟಣಗಳಲ್ಲಿ ಕೂಲಿಮಾಡಿ ಹೊಟ್ಟೆ ತುಂಬಿಕೊಳ್ಳಲು ಹೋಗುವರು. ಇವರು ಹೊಟ್ಟೆಯ ಸಲುವಾಗಿ ಕಷ್ಟಪಟ್ಟು ದುಡಿಯಬೇಕಾಗುವದು. ಆದ್ದರಿಂದ ಇವರು ಕಷ್ಟಸಹಿಸುವವರೂ, ಸ್ವಾವಲಂಬಿಗಳೂ ಆಗಿರುವರು. ಮಿತವ್ಯಯ ಮತ್ತು ಅಚ್ಚುಕಟ್ಟುತನದಿಂದ ಇರುವರು. ಭೂಮಿಯ ಒಡೆಯರು ಮತ್ತು ಒಳ್ಳೆಯ ಸ್ಥಿತಿಯಲ್ಲಿ ಇರುವವರು ಶಿಕ್ಷಣಪಡೆದು ನೌಕರಿಮಾಡುತ್ತಾರೆ. ಗುಜರಾತಿಗರಂತೆ ವ್ಯಾಪಾರ ಮಾಡುವ ಸಾಹಸವೃತ್ತಿ ಈ ಜನರಲ್ಲಿ ಕಡಮೆ. ಸಿಕ್ಕಷ್ಟರಲ್ಲಿಯೆ ಉಳಿಸಿಕೊಂಡು ಬಾಳಬೇಕೆನ್ನುವ ಸ್ವಭಾವವು ಈ ಜನರಲ್ಲಿ ಕಾಣುವದು.



## ಅಭ್ಯಸನಗಳು

೧. ಕೊಂಕಣದಲ್ಲಿಯ ಹವೆ ಎಂತಹದು ?

೨. ಕೊಂಕಣೀ ಜನರ ಜೀವನವು ಕಷ್ಟದ್ದಾಗಿದೆ ಏಕೆ ?

೩. ಕೊಂಕಣೀ ಜನರ (ಅ) ಆಹಾರ (ಆ) ಉದ್ಯೋಗ (ಇ) ಗುಣಗಳು— ಇವುಗಳನ್ನು ವಿವರಿಸಿರಿ.

## (ಇ) ಮಲೆನಾಡಿನ ಜನರು

ಮಲೆನಾಡಿನಲ್ಲಿ ಕರ್ನಾಟಕದ ಭಾಗವು ದಟ್ಟವಾದ ಅಡವಿಗಳಿಂದ ತುಂಬಿದೆ. ತಗ್ಗು ಪ್ರದೇಶಗಳ ಭೂಮಿಯು ವ್ಯವಸಾಯಕ್ಕೆ ಅನುಕೂಲವಾಗಿದೆ.



ಆಕೃತಿ ೨೯. ಮಲೆನಾಡಿನ ಕೂಲಿಕಾರರು

**ಮಹಾರಾಷ್ಟ್ರದ ಭಾಗವು** ಗರಸು-ಕಲ್ಲು ಭೂಮಿಯಾದ್ದರಿಂದ, ಗಿಡ-ಮರಗಳು ಕಡಮೆ; ಬೆಳೆಗಳೂ ಕಡಮೆ. ಈ ಕಾರಣದಿಂದ ಇವೆರಡೂ ಭಾಗಗಳ ಜನರ ಜೀವನದ ರೀತಿಗಳು ಬೇರೆಬೇರೆಯಾಗಿವೆ.

### (೧) ಕರ್ನಾಟಕದ ಮಲೆನಾಡು

ಅಡವಿಗಳಿಂದ ತುಂಬಿದೆ. ತಗ್ಗುಪ್ರದೇಶವಿದ್ದಲ್ಲಿ ಜನರು ಒಕ್ಕಲು

ತನವನ್ನು ಸಾಗಿಸಿಕೊಂಡು ಒಂಟಿಗರಾಗಿ ಇರಬೇಕಾಗುತ್ತದೆ. ಆದ್ದರಿಂದ ೮–೧೦ ಗುಡಿಸಿಲು ಒಂದೇ ಕಡೆಗೆ ನೆಲಸಿದ್ದರೂ ಅದೇ ಒಂದು ಊರು ಎನ್ನಿಸುವದು. ಇದುಕೂಡ ಇಲ್ಲದೆ, ತೆಂಗು-ಅಡಿಕೆ-ಬಾಳೆಗಳ ತೋಟವನ್ನು ಮಾಡಿಕೊಂಡು ಒಂದೊಂದೇ ಕುಟುಂಬವು ಒಂಟಿಗವಾಗಿ ಇರುವದೂ ಇಲ್ಲಿ ಕಾಣುವದು.

ವಿಪರೀತ ಮಳೆ, ತಂಪು ಹಾಗೂ ರೋಗಕಾರಕ ಹವೆ–ಇವುಗಳಿಂದ ಇಲ್ಲಿಯ ಜನರು ಬೇನೆ ಬೀಳುವದು ಹೆಚ್ಚು. ಅಡವಿಯ ಪಶುಗಳ ಕಾಟವೂ ಇವರಿಗೆ ತಪ್ಪಿದ್ದಲ್ಲ. ಸಮೀಪದಲ್ಲಿ ದೊಡ್ಡ ಊರುಗಳಿಲ್ಲ; ಸಾಗಾಟದ ಅನುಕೂಲತೆಗಳೂ ಇಲ್ಲ; ಮಕ್ಕಳಿಗೆ ಶಿಕ್ಷಣದ ಸೌಕರ್ಯವಿಲ್ಲ. ಈ ಮೂಲಕ ಇಲ್ಲಿಯ ಜನರ ಜೀವನವು ಬಹಳ ಕಷ್ಟಮಯವಾಗಿದೆ. ಇಲ್ಲಿ ಸಾಗುವಳಿಯ ಭೂಮಿ ತೀರ ಕಡಮೆ; ಇದ್ದುದೆಲ್ಲವೂ ಕೆಲವು ಜನ ಭೂಮಿಯೊಡೆಯರ ವಶದಲ್ಲಿ. ಮಿಕ್ಕವರೆಲ್ಲರೂ ಕೂಲಿ ಕುಂಬಳಿಯಿಂದ ಹೊಟ್ಟೆ ತುಂಬಿಕೊಳ್ಳುವರು. ಇವರಿಗೆ ಕುಣಬಿಗಳೆನ್ನುವರು. ಇವರು ತೀರ ಬಡವರು. ಮೈತುಂಬ ಬಟ್ಟೆಗಳಿಲ್ಲ. ಅಕ್ಕಿಯ ಗಂಜಿ, ಅನ್ನ, ಇಲ್ಲವೆ ಕಾಡುಪಶುಗಳ ಮಾಂಸ ಇವೇ ಈ ಜನರ ಮುಖ್ಯ ಆಹಾರ.

ತೋಟಗಳಲ್ಲಿ ಅಡಿಕೆ, ತೆಂಗು, ಬಾಳೆ, ಮೆಣಸು, ಯಾಲಕ್ಕಿಯಂತಹ ಬೆಲೆಯುಳ್ಳ ಬೆಳೆಗಳು ಬರುತ್ತವೆ. ಅಡವಿಗಳಲ್ಲಿ ಶ್ರೀಗಂಧ, ತೇಗು, ಮತ್ತಿ ಮೊದಲಾದ ಉಪಯುಕ್ತ ಮರಗಳು ಬೆಳೆಯುತ್ತವೆ. ಇವುಗಳ ಸಹಾಯದಿಂದ ಮಲೆನಾಡ ಜನರು ಸುಖವಾಗಿ ಜೀವಿಸಬಹುದು. ಆದರೆ ಕಾಡುಪಶುಗಳ ಕಾಟ ತಪ್ಪಬೇಕು; ರೋಗಪೀಡೆ ಕಡಮೆಯಾಗಬೇಕು; ಸಾಗಾಟದ ಸೌಕರ್ಯಗಳು ಹೆಚ್ಚಾಗಬೇಕು. ಸರಕಾರದವರು ಇವುಗಳ ಬಗೆಗೆ ಈ ಪ್ರಯತ್ನ ನಡೆಸಿದ್ದಾರೆ.

## (೨) ಮಹಾರಾಷ್ಟ್ರದ ಮಲೆನಾಡು

ಬಡಭೂಮಿ, ಗುಡ್ಡಗಾಡಿನ ವಾಸ, ಸ್ವಲ್ಪ ಒಕ್ಕಲುತನ, ಕಟ್ಟಿಗೆಕಡಿದು ಮಾರುವದು, ಬೇಟೆಯಾಡುವದು, ಔಷಧ-ವನಸ್ಪತಿಗಳನ್ನು ಕೂಡಿಹಾಕಿ ಪೇಟೆಗೆ ಒಯ್ದು ಮಾರುವದು—ಇವೇ ಇಲ್ಲಿಯ ಜನರ ಉದ್ಯೋಗಗಳು. ಎಷ್ಟು ಕಷ್ಟಪಟ್ಟರೂ ಹೊಟ್ಟೆ ತುಂಬುವದಿಲ್ಲ. ಆದ್ದರಿಂದ ಜನರು ಬಹಳ ಬಡವರು; ಗುಡಿಸಿಲುಗಳಲ್ಲಿ ವಾಸಿಸುವರು. ಬಟ್ಟೆಗಳು ತೀರ ಕಡಮೆ. ಇವರಿಗೆ **ಮಾವಳಿ** ಜನರು ಎನ್ನುವರು.

ಅರಣ್ಯವಾಸದ ಕಷ್ಟಮಯ ಜೀವನದಿಂದ ಈ ಜನರು ಬಹಳ ಗಟ್ಟಿಗರೂ, ಧೀರರೂ ಆಗಿದ್ದಾರೆ. ಕಂದು ಮೈಬಣ್ಣ, ಸಾಧಾರಣ ನಿಲುವಿಕೆ, ಹಾಗೂ ಹುರಿಕಟ್ಟಾದ ದೇಹ. ಇವರ ಸ್ವಭಾವ ಸರಳ. ಒಮ್ಮೆ ಒಬ್ಬರನ್ನು ನಂಬಿದರೆ, ಅವರಿಗಾಗಿ ಈ ಜನರು ಪ್ರಾಣವನ್ನು ಕೊಡಲು ಸಹ ಹಿಂಜರಿಯರು. ಹಿಂದೆ ಮರಾಠಾ ರಾಜ್ಯವನ್ನು ಸ್ಥಾಪಿಸುವ ಕಾರ್ಯದಲ್ಲಿ ಶಿವಾಜಿಗೆ ಈ ಮಾವಳೆ ಜನರಿಂದ ಬಹಳ ಸಹಾಯವಾಯಿತು. ಇತ್ತೀಚೆಗೆ ಕೆಲವರು ಪುಣೆ-ಮುಂಬಯಿಗಳಂತಹ ದೊಡ್ಡ ಪಟ್ಟಣಗಳಿಗೆ ಹೋಗಿ, ಕೂಲಿಮಾಡಿ ಹೊಟ್ಟೆತುಂಬಿಕೊಳ್ಳುವರು.

### ಅಭ್ಯಸನಗಳು

೧. ಕರ್ನಾಟಕದ ಮಲೆನಾಡಿನ ಜನರು ಯಾವ ಬೆಳೆಗಳನ್ನು ಬೆಳೆಯುತ್ತಾರೆ ?
೨. ಕರ್ನಾಟಕದ ಮಲೆನಾಡಿನ ಜನರ ಜೀವನವು ಕಷ್ಟಮಯವಾಗಿದೆ ಏಕೆ ?
೩. ಮಹಾರಾಷ್ಟ್ರದ ಮಲೆನಾಡಿನ ಜನರ ಮುಖ್ಯ ಉದ್ಯೋಗಗಳು ಯಾವವು ?
೪. ಮಾವಳೆ ಜನರ ಗುಣಗಳನ್ನು ಹೇಳಿರಿ.
೫. ಮಲೆನಾಡಿನ ಭೂಮಿಯು ಎಂಥದು ?

---

## (ಈ) ಮಲೆನಾಡ ಪೂರ್ವದ ಸೆರಗಿನ ಜನರು

ಭೂಮಿ ಬೆಳೆಯುಳ್ಳುದು. ಮಳೆ ಒಳಿತು. ಹವೆ ತುಸು ತಂಪು ಹಾಗೂ ಆರೋಗ್ಯಕರವಾದುದು. ಮುಂಗಾರಿಯ ಎಲ್ಲ ಬೆಳೆಗಳೂ ಚೆನ್ನಾಗಿ ಬರುತ್ತವೆ. ಬರಬೀಳುವ ಅಂಜಿಕೆಯಿಲ್ಲ. ಹುಲ್ಲು, ಹೊಟ್ಟು, ಕಣಿಕೆ ಸಾಕಷ್ಟು ಸಿಗುವದ ರಿಂದ ದನಗಳು ಚೆನ್ನಾಗಿರುತ್ತವೆ. ಹೈನ ಹೆಚ್ಚು. ಜೋಳವು ಜನರ ಮುಖ್ಯ ಆಹಾರ. ಅಕ್ಕಿ, ಗೋದಿ, ಕಾಯಿಪಲ್ಲೆ, ಹೈನ ಇವೆಲ್ಲವೂ ಆಹಾರದಲ್ಲಿ ಸೇರಿರು ತ್ತವೆ. ಕಸುವಿನ ಆಹಾರ ಮತ್ತು ಆರೋಗ್ಯಕರವಾದ ಹವೆ ಇವುಗಳ ಮೂಲಕ ಇಲ್ಲಿಯ ಜನರು ಉಂಡು-ತಿಂದು ಸುಖವಾಗಿ ಬಾಳುತ್ತಾರೆ.

ಇಲ್ಲಿಯ ರೈತನಿಗೆ ಸಾಮಾನ್ಯವಾಗಿ ಸ್ವಂತದ ತುಸು ಭೂಮಿ, ಸಣ್ಣದೊಂದು ಮನೆ, ಒಂದೆರಡು ದನಕರುಗಳು ಇರುತ್ತವೆ. ಹೆಂಡತಿ-ಮಕ್ಕಳನ್ನು ಕೂಡಿ-ಕೊಂಡು ಇವನು ಹೊಲದ ಕೆಲಸಗಳನ್ನು ಚೆನ್ನಾಗಿ ಮಾಡುತ್ತಾನೆ, ಹುಲುಸಾಗಿ ಬೆಳೆಯುತ್ತಾನೆ. ಆದ್ದರಿಂದ ಇವರ ಜೀವನವು ಒಳಿತಾಗಿ ಸಾಗುತ್ತದೆ.

ಇವರ ಮನೆಗಳು ಕಲ್ಲು-ಮಣ್ಣುಗಳಿಂದ ಕಟ್ಟಿದವಿದ್ದು, ಮೇಲೆ ತುಸು ಇಳಿಜಾರಾದ ಹಂಚಿನ ಚಪ್ಪರಹಾಕಿದವು ಇರುತ್ತವೆ. ೨–೩ ಮೈಲಿಗೊಂದು ಹಳ್ಳಿ; ಅವೆಲ್ಲವೂ ಜನರಿಂದ ತುಂಬಿರುತ್ತವೆ. ಜನರು ಬಣ್ಣ–ಬಣ್ಣದ ಬಟ್ಟೆಗಳನ್ನು ಧರಿಸುವರು; ಉತ್ಸಾಹದಿಂದ ಹಬ್ಬ–ಜಾತ್ರೆಗಳನ್ನು ಮಾಡುವರು. ಆಟ–ನೋಟಗಳ ಮೇಲೆ ಅವರಿಗೆ ಪ್ರೀತಿ; ಕಸರತ್ತು, ಕುಸ್ತಿ ಮುಂತಾದ ಶಕ್ತಿ–ಸಾಹಸಗಳಲ್ಲಿ ಹೆಚ್ಚು ಆಸಕ್ತಿ.

ಒಕ್ಕಲುತನವೇ ಮುಖ್ಯ ಉದ್ಯೋಗವಾದರೂ ಜನರೂ ತರತರದ ವ್ಯಾಪಾರ–ಉದ್ಯೋಗಗಳನ್ನು ಮಾಡುತ್ತಾರೆ. ಒಟ್ಟಿನ ಮೇಲೆ ಗುಜರಾತಿ ಜನರಂತೆ ಇವರ ಜೀವನವೂ ಒಳಿತಾದುದೆಂದು ಹೇಳಬಹುದು.

## (ಉ) ಬಯಲುಸೀಮೆಯ (ಬೆಳವಲದ) ಜನರು

ಭೂಮಿ ಮೇಲಾದ ಎರೆ ಮತ್ತು ಕಸುವಿನ ಮಡಿಕಟ್ಟುಮಣ್ಣಿನದು. ಸರಿಯಾಗಿ ಮಳೆಯಾದರೆ ಹುಲುಸಾಗಿ ಬೆಳೆಯುವದು. ಆದರೆ ಮಳೆಯಾಗುವುದೇ ನಿಶ್ಚಿತವಿರುವದಿಲ್ಲ. ಪ್ರತಿ ೨–೩ ವರುಷಕ್ಕೊಮ್ಮೆ ಬರಬೀಳುವ ಸಂಭವವಿರುತ್ತದೆ. ಉಷ್ಣ ಹಾಗೂ ಒಣ ಹವೆ; ಬಹಳ ಆರೋಗ್ಯಕರವಾದುದು. ಜೋಳ, ಗೋದಿ, ಹತ್ತಿ, ಸೆಂಗಾ—ಇವು ಮುಖ್ಯವಾದ ಬೆಳೆಗಳು.

ಇಲ್ಲಿಯ ಹೊಲಗಳು ದೊಡ್ಡವು. ಕಸುವಿನ ಭೂಮಿಯಾಗಿರುವದರಿಂದ ವಿಶೇಷ ದುಡಿತವಿಲ್ಲದೆ ಸಾಕಷ್ಟು ಬೆಳೆಯುವವು. ಮಳೆಯಾಗದ ವರುಷವಂತೂ ರೈತರಿಗೆ ಕೆಲಸವೇ ಇರುವದಿಲ್ಲ. ಇವುಗಳ ಪರಿಣಾಮವಾಗಿ ಜನರಲ್ಲಿ ಆಲಸ್ಯದ ಸ್ವಭಾವವು ಕಂಡುಬರುವದು; ಹಿಡಿದ ಕೆಲಸವನ್ನು ಕೊನೆಗಾಣಿಸಬೇಕೆಂಬ ಪ್ರವೃತ್ತಿ ಕಡಮೆ.

ಇಲ್ಲಿಯ ಹಳ್ಳಿಗಳು ದೂರದೂರದಲ್ಲಿ ಇರುವವು. ನಡುವೆ ೪–೬ ಮೈಲುಗಳ ಅಂತರವಿರುವದುಂಟು. ಆಳವಾದ ಎರೆ ಭೂಮಿ ಹಾಗು ಕಡಮೆ ಮಳೆ; ಆದ್ದರಿಂದ ಊರಲ್ಲಿ ಬಾವಿಗಳು ಕಡಮೆ; ಜನರಿಗೆ ನೀರಿನ ಕೊರತೆ ತಪ್ಪುವದಿಲ್ಲ. ಕೆಲವು ಕಡೆಗೆ ಒಂದೆರಡು ಮೈಲು ಅಂತರದಿಂದ ಜನರು ನೀರನ್ನು ಹೊತ್ತುತರುತ್ತಾರೆ. ಹೆಚ್ಚು ಉಷ್ಣವಾದ ಹವೆಯ ಮೂಲಕ ಜನರು ಕಲ್ಲು–ಮಣ್ಣುಗಳಿಂದ ಎತ್ತರವಾದ ಮನೆಗಳನ್ನು ಕಟ್ಟುತ್ತಾರೆ. ಅವೆಲ್ಲವೂ ಮೇಲ್ಮಾಳಿಗೆಯವು. ಬೇಸಗೆಯಲ್ಲಿ ಈ ಮನೆಗಳು ಒಳಗೆ

Copyright



ತಂಪಾಗಿರುತ್ತವೆ. ಆ ಕಾಲದಲ್ಲಿ ಜನರು ರಾತ್ರಿಯಲ್ಲಿ ಹೆಚ್ಚಾಗಿ ಮಾಳಿಗೆಯ ಮೇಲೆಯೇ ಮಲಗುವರು.

ಜೋಳವೇ ಮುಖ್ಯ ಆಹಾರ. ಗೋದಿಯನ್ನೂ ಉಪಯೋಗಿಸುವರು. ಎರೆಭೂಮಿಯಲ್ಲಿ ಬೆಳೆಯುವ ಹುಲ್ಲು, ಕಣಿಕೆ ಮೊದಲಾದವು ದನಗಳಿ



ಚಿತ್ರ ೨೮

ಬಹಳ ಪುಷ್ಟಿಕರವಾಗಿರುತ್ತವೆ. ಹತ್ತಿಯ ಕಾಳು, ಅಕ್ಕಡಿಯ ಕಾಳು, ಹೊಟ್ಟು ಮೊದಲಾದವೂ ಸುಲಭವಾಗಿ ಸಿಗುತ್ತವೆ. ಇದರಿಂದ ಬಯಲುಸೀಮೆ ಯಲ್ಲಿ ದನಕರುಗಳು ಪುಷ್ಟವಾಗಿ ಬೆಳೆಯುವವು. ಆದ್ದರಿಂದ ಇಲ್ಲಿ ಹೈನವೂ

ವಿಶೇಷ. ಹಿತಕರವಾದ ಹವೆ, ಸತ್ತ್ವವುಳ್ಳ ಆಹಾರ—ಇವುಗಳ ಮೂಲಕ ಜನರು ಬಲವುಳ್ಳವರಾಗಿರುವರು. ಆದ್ದರಿಂದ ಯುಕ್ತಿಗಿಂತ ಹೆಚ್ಚಾಗಿ ಶಕ್ತಿಯಿಂದಲೇ ಕೆಲಸಮಾಡುವ ಸ್ವಭಾವ ಇವರಲ್ಲಿ ಕಂಡುಬರುವದು.

ಇವರು ಸರಳ ಹಾಗೂ ಉದಾರ ಸ್ವಭಾವದವರು. ಇವರಲ್ಲಿ ಆದರಾತಿಥ್ಯವೂ ಹೆಚ್ಚು. ಚೆನ್ನಾಗಿ ಬೆಳೆ ಬಂದ ವರುಷ ಯಾವುದಕ್ಕೂ ಇವರು ಲೆಕ್ಕ-ಹಾಕುವದಿಲ್ಲ. ಕೊಡುಗೈಯಿಂದ ದಾನ-ಧರ್ಮಗಳನ್ನು ಮಾಡುವರು. ಬಡಬಗ್ಗರಿಗೆ ಸಹಾಯಮಾಡುವರು. ಬೆಳೆಬಾರದ ವರುಷ ಕಷ್ಟವನ್ನೂ ಸಹಿಸುವರು.

ಒಟ್ಟಿನಲ್ಲಿ ಕೊಂಕಣದ ಮತ್ತು ಬಯಲುಸೀಮೆಯ ಜನರ ಸ್ವಭಾವಗಳಲ್ಲಿ ಬಹಳ ವೈಷಮ್ಯವು ಕಂಡುಬರುವದು. ಮಲೆನಾಡ ಪೂರ್ವದ ಸೆರಗಿನ ಜನರ ಸ್ವಭಾವವು ಇವೆರಡಕ್ಕೂ ಮಧ್ಯದಲ್ಲಿರುವದೆಂದು ಹೇಳಬಹುದು.

### ಅಭ್ಯಸನಗಳು

೧. ಮಲೆನಾಡಿನ ಪೂರ್ವದ ಸೆರಗಿನ ಜನರ ಜೀವನವನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

೨. ಬೆಳವಲದಲ್ಲಿ ಮಾಳಿಗೆಯ ಮನೆಗಳಿರುತ್ತವೆ ಏಕೆ ?

---

## ೧೦. ರಾತ್ರಿಯಲ್ಲಿ ಆಕಾಶದ ನಿರೀಕ್ಷಣೆ

ವಿದ್ಯಾರ್ಥಿಗಳೆ, ನಾವು ಭೂಗೋಲದ ಅಭ್ಯಾಸದಲ್ಲಿ ಮೇಲಿಂದ ಮೇಲೆ ದಿಕ್ಕುಗಳ ಹೆಸರುಗಳನ್ನು ಬಳಸುತ್ತೇವೆ. ಆದರೆ ದಿಕ್ಕುಗಳನ್ನು ತಿಳಿದುಕೊಳ್ಳುವದು ಹೇಗೆ? ಹಗಲು ಸೂರ್ಯೋದಯ-ಸೂರ್ಯಾಸ್ತಗಳನ್ನು ನಿರೀಕ್ಷಿಸಿ ನಾವು ದಿಕ್ಕುಗಳನ್ನು ಹೇಳಬಹುದು. ಹಾಗೆಯೇ ರಾತ್ರಿಯಲ್ಲಿಯೂ ದಿಕ್ಕುಗಳನ್ನು ತಿಳಿಯಲು ಒಂದು ಅನುಕೂಲತೆ ಇರುವದು. ಅದೇನೆಂಬುದನ್ನು ಈಗ ಅರಿತುಕೊಳ್ಳುವಾ.

ರಾತ್ರಿಯಲ್ಲಿ ಮೋಡಗಳು ಇಲ್ಲದಾಗ ಆಕಾಶವನ್ನು ನೋಡಿರಿ. ಹೊಳೆಯುತ್ತಿರುವ ಚಂದ್ರನೂ ಮಿಣುಕುತ್ತಿರುವ ಅಸಂಖ್ಯ ನಕ್ಷತ್ರಗಳೂ ಕಾಣುವವು. ತುಸುಹೊತ್ತಿನಲ್ಲಿ ಚಂದ್ರನೂ ಆ ನಕ್ಷತ್ರಗಳೂ ಚಲಿಸಿ ಮುಂದೆ ಸರಿದುದು ಕಂಡುಬರುವದು. ಒಂದು ದಿನ ಇಡಿಯ ರಾತ್ರಿಯೆಲ್ಲ ಆಕಾಶ

ವನ್ನು ನಿರೀಕ್ಷಿಸುತ್ತ ಕುಳಿತುಕೊಳ್ಳುವಾ. ಏನು ಸೋಜಿಗ! ಮೊದಲು ಕಾಣಿಸಿಕೊಂಡ ಎಷ್ಟೋ ನಕ್ಷತ್ರಗಳು ಕ್ರಮೇಣ ಮುಳುಗಿಹೋಗುವವು. ಬೇರೆ ನಕ್ಷತ್ರಗಳು ಮೇಲಕ್ಕೆ ಏರಿ ಬಂದು ಅವೂ ಕ್ರಮೇಣ ಮುಳುಗಿಹೋಗುವವು. ಈ ಕ್ರಮವು ಹಗಲು ಸಹ ನಡೆದಿರುವದು; ಆದರೆ ಉಜ್ವಲವಾದ ಸೂರ್ಯನ ಪ್ರಕಾಶದಲ್ಲಿ ನಕ್ಷತ್ರಗಳ ಮಿಣುಕುಪ್ರಕಾಶವು ಅಡಗಿ ಹೋಗುವದು. ಆದ್ದರಿಂದ ಹಗಲು ನಕ್ಷತ್ರಗಳು ನಮ್ಮ ಕಣ್ಣಿಗೆ ಕಾಣುವದಿಲ್ಲ.

**ಉತ್ತರ ದಿಕ್ಕಿನಲ್ಲಿ** ಭೂಮಿಯಿಂದ ತುಸು ಎತ್ತರದಮೇಲೆ ಕಾಣುವ ಎಲ್ಲ ನಕ್ಷತ್ರಗಳನ್ನು ಮತ್ತೆ ಒಂದು ರಾತ್ರಿ ಬಹಳ ಸೂಕ್ಷ್ಮವಾಗಿ ನಿರೀಕ್ಷಿಸುವಾ;




ಆಕೃತಿ ೩೧.

ಏನು ಕಾಣುವದು? ಮೊದಲು ಕಂಡಂತೆ ಎಲ್ಲ ಸಣ್ಣ–ದೊಡ್ಡ ನಕ್ಷತ್ರಗಳು ಕ್ರಮೇಣ ಚಲಿಸಿದರೂ, ತುಸು ಮಸುಕಾದ ಒಂದು ನಕ್ಷತ್ರವು ಮಾತ್ರ ಚಲಿಸದೆ ಒಂದೇ ಕಡೆಯಲ್ಲಿ ಸ್ಥಿರವಾಗಿರುವದು ನಮಗೆ ಕಾಣುವದು. ದಿನ-ದಿನವೂ ನಿರೀಕ್ಷಿಸಿದರೂ, ಈ ನಕ್ಷತ್ರವು ಅದೇ ಸ್ಥಳದಲ್ಲಿ ಇರುವದೆಂದು ನಮಗೆ ಮನವರಿಕೆಯಾಗುವದು. ಇಷ್ಟೇ ಅಲ್ಲದೆ ಈ ನಕ್ಷತ್ರವು ನಿಜವಾದ ಉತ್ತರ-ದಿಕ್ಕನ್ನು ತೋರಿಸುತ್ತಿದೆಯೆಂದು ಬೇರೆ ಬೇರೆ ರೀತಿಯಿಂದ ಕಂಡುಹಿಡಿದಿರುವದು. ಆದ್ದರಿಂದ ಇದನ್ನು **ಉತ್ತರ ಧ್ರುವನಕ್ಷತ್ರ**ವೆಂದು ಕರೆಯುವರು. ರಾತ್ರಿಯಲ್ಲಿ ಈ ಧ್ರುವನಕ್ಷತ್ರವನ್ನು ನೋಡಿ ನಾವು ಉತ್ತರ ದಿಕ್ಕನ್ನೂ ಹಾಗೆಯೆ ಉಳಿದ ದಿಕ್ಕುಗಳನ್ನೂ ಹೇಳಬಹುದು. ಆದರೆ ಈ ನಕ್ಷತ್ರವು

ಅಷ್ಟು ಸ್ಪಷ್ಟವಾಗಿ ಎದ್ದು ಕಾಣುವದಿಲ್ಲ. ಆದ್ದರಿಂದ ಇತರ ಅಸಂಖ್ಯ ನಕ್ಷತ್ರಗಳಲ್ಲಿ ಈ ಧ್ರುವನಕ್ಷತ್ರವನ್ನು ಕಂಡುಹಿಡಿಯಲು ಒಂದು ಸುಲಭವಾದ ಉಪಾಯವನ್ನು ಹುಡುಕಿರುವರು.

ಧ್ರುವನಕ್ಷತ್ರದಿಂದ ತುಸು ಅಂತರದಲ್ಲಿ ಹೆಚ್ಚು ಮಿನುಗುವ ಏಳು ನಕ್ಷತ್ರಗಳ ಒಂದು ಗುಂಪು ಕಾಣುವದು; ಈ ಗುಂಪಿಗೆ 'ಸಪ್ತರ್ಷಿ ನಕ್ಷತ್ರ ಪುಂಜ (ಗುಂಪು)' ಎನ್ನುವರು. ಈ ಏಳು ನಕ್ಷತ್ರಗಳನ್ನು ಸರಳರೇಖೆಗಳಿಂದ ಜೋಡಿಸಿದರೆ, ಇವು ಹೇಗೆ ಕಾಣುತ್ತವೆಂಬುದನ್ನೂ ಪ್ರತಿ ನಾಲ್ಕು ತಾಸಿಗೆ ಇವುಗಳ ಸ್ಥಿತಿಯು ಹೇಗೆ ಬದಲಾಗುತ್ತದೆಂಬುದನ್ನೂ ಆಕೃತಿ ೩೧ರಲ್ಲಿ ತೋರಿಸಿದೆ. ಈ ನಕ್ಷತ್ರಪುಂಜದಲ್ಲಿಯ ಮುಂದಿನ ಎರಡು ನಕ್ಷತ್ರಗಳನ್ನು ಜೋಡಿಸಿದ ರೇಖೆಯನ್ನು ನೀಟಾಗಿ ಮುಂದೆ ಎಳೆದರೆ ಅದು ಧ್ರುವನಕ್ಷತ್ರದಲ್ಲಿ ಹಾಯುವದು. ಈ ಮೇರೆಗೆ ನಾವು ಧ್ರುವನಕ್ಷತ್ರವನ್ನೂ ಅದರ ಮೇಲಿಂದ ಉತ್ತರದಿಕ್ಕನ್ನೂ ಕಂಡುಕೊಳ್ಳಬಹುದು.

## ಅಭ್ಯಸನಗಳು

೧. ಧ್ರುವನಕ್ಷತ್ರವು ಯಾವ ದಿಕ್ಕಿನಲ್ಲಿ ಇರುತ್ತದೆ ?

೨. ಧ್ರುವನಕ್ಷತ್ರವನ್ನು ಕಂಡುಹಿಡಿಯುವ ಉಪಾಯವು ಯಾವದು ? ಸಪ್ತರ್ಷಿ ಪುಂಜವೆಂದರೇನು ?

# ಸಾಮಾನ್ಯಜ್ಞಾನ

## ೧. ಆಹಾರ

ಮನುಷ್ಯ, ಪಶು, ಪಕ್ಷಿ ಮುಂತಾದ ಯಾವತ್ತು ಪ್ರಾಣಿಗಳಿಗೆ ಆಹಾರವು ಬೇಕು. ಆಹಾರವು ದೊರೆಯದಿದ್ದರೆ ಅವು ಹಸಿವೆಯಿಂದ ಬಳಲುವವು. ಆಹಾರವಿಲ್ಲದೆ ವನಸ್ಪತಿಗಳೂ ಬದುಕಲಾರವು. ಯಾವತ್ತು ಪ್ರಾಣಿಗಳು ಮತ್ತು ವನಸ್ಪತಿಗಳು ಆಹಾರವನ್ನು ತಿಂದು ಜೀವಿಸುವವು.

ಮಾನವನ ಆಹಾರವು ಇತರ ಪ್ರಾಣಿಗಳ ಮತ್ತು ವನಸ್ಪತಿಗಳ ಆಹಾರಕ್ಕಿಂತ ತುಸು ಭಿನ್ನವಾಗಿರುವದು. ಮಾನವನ ಆಹಾರವು ಬಹುಮಟ್ಟಿಗೆ




ಆಕೃತಿ ೧.

ಕೃತ್ರಿಮವಾಗಿರುತ್ತದೆ; ಆದರೆ ಇತರ ಪ್ರಾಣಿಗಳ ಆಹಾರವು ಸ್ವಾಭಾವಿಕವಾಗಿರುತ್ತದೆ. ಮಾನವನ ಆಹಾರದೊಳಗಿನ ಹಲವು ಪದಾರ್ಥಗಳು ವನಸ್ಪತಿಗಳಿಂದ ದೊರೆಯುವವು. ಧಾನ್ಯಗಳು, ಬೇಳೆ ಕಾಳುಗಳು, ಹಣ್ಣು-ಹಂಪಲಗಳು, ಪಲ್ಲೆಯ ಪದಾರ್ಥಗಳು—ಇವೆಲ್ಲ ನಮಗೆ ವನಸ್ಪತಿಗಳಿಂದಲೇ ಸಿಗುವವು. ಹಾಲು, ಮೊಸರು, ಬೆಣ್ಣೆ, ತುಪ್ಪ, ಮಾಂಸ, ತತ್ತಿ— ಇವು ಪ್ರಾಣಿಗಳಿಂದ ದೊರೆಯುವವು. ಈ ರೀತಿಯ ನಮ್ಮ ಆಹಾರದಲ್ಲಿ (೧) ವನಸ್ಪತಿಗಳಿಂದ ದೊರೆಯುವ ಆಹಾರ, (೨) ಪ್ರಾಣಿಗಳಿಂದ ದೊರೆಯುವ ಆಹಾರ—ಎಂದು ಎರಡು ಪ್ರಕಾರಗಳಿರುವವು.

ನಾವು ದಿನಾಲು ಹೊತ್ತುಹೊತ್ತಿಗೆ ಉಣ್ಣದಿದ್ದರೆ ನಮ್ಮ ಹಸಿವೆ ಹೆಚ್ಚುವದು; ಕೆಲಸಮಾಡುವದಕ್ಕೆ ಶಕ್ತಿ ಬರುವದಿಲ್ಲ, ಉತ್ಸಾಹವೂ ಇರುವದಿಲ್ಲ; ಮೈ ತಣ್ಣಗಾಗುವದು. ಕೆಲವು ದಿವಸಗಳ ವರೆಗೆ ಊಟಮಾಡದಿದ್ದರೆ ನಮ್ಮ ಶರೀರವು ಬಡಕಲಾಗುವದು. ಇದರಿಂದ ನಮಗೆ ಏನು ಗೊತ್ತಾಗುವದು? ಆಹಾರವು ನಮಗೆ ಕೆಲಸಮಾಡುವ ಶಕ್ತಿಯನ್ನೂ ಉತ್ಸಾಹವನ್ನೂ ಕೊಡುವದು; ನಮ್ಮ ಮೈಯನ್ನು ಬೆಚ್ಚಗೆ ಇಡುವದು; ಶರೀರವನ್ನು ಸವೆಯಗೊಡುವದಿಲ್ಲ. ಇನ್ನೂ ಒಂದು ಸಂಗತಿಯನ್ನು ನೋಡಿರಿ. ಹುಟ್ಟಿದಾಗ ಕೂಸು ತೀರ ಚಿಕ್ಕದಾಗಿರುವದು. ಅದು ನಾವಕಾಶವಾಗಿ ಬೆಳೆಯಹತ್ತಿ ದೊಡ್ಡದಾಗುವದು. ಹೀಗೆ ಶರೀರದ ಬೆಳವಣಿಗೆಯಾಗುವದಕ್ಕೂ ಆಹಾರವು ಬೇಕು. ಈ ಎಲ್ಲ ಸಂಗತಿಗಳನ್ನು ನೋಡಿದರೆ ಆಹಾರವು ನಮ್ಮ ಶರೀರದಲ್ಲಿ ಮುಖ್ಯವಾಗಿ ನಾಲ್ಕು ಬಗೆಯ ಕಾರ್ಯಗಳನ್ನು ಮಾಡುವದು ಎಂಬುದು ಗೊತ್ತಾಗುವದು. (೧) ಆಹಾರದಿಂದ ನಮ್ಮ ಶರೀರಕ್ಕೆ ಕೆಲಸಮಾಡುವ ಶಕ್ತಿಯೂ ಉತ್ಸಾಹವೂ ದೊರೆಯುವವು. (೨) ಆಹಾರವು ನಮ್ಮ ಶರೀರವನ್ನು ಬೆಚ್ಚಗೆ ಇಡುವದು. (೩) ಆಹಾರದಿಂದ ನಮ್ಮ ಶರೀರವು ಬೆಳವಣಿಗೆಯನ್ನು ಹೊಂದುವದು. (೪) ಆಹಾರವು ನಮ್ಮ ಶರೀರದ ಸವಕಳಿಯನ್ನು ಪೂರಯಿಸಿ, ಅದು ಸವೆದು ನಾಶವಾಗದಂತೆ ನೋಡಿಕೊಳ್ಳುವದು.

**ಆಹಾರ ಪ್ರಕಾರಗಳು:—** ನಮ್ಮ ಆಹಾರದಲ್ಲಿ ವನಸ್ಪತಿಗಳಿಂದ ಹುಟ್ಟಿದವು, ಪ್ರಾಣಿಗಳಿಂದ ಹುಟ್ಟಿದವು— ಎಂದು ಎರಡು ಪ್ರಕಾರಗಳನ್ನು ಕಲ್ಪಿಸಿದ್ದೇವೆ. ವನಸ್ಪತಿಗಳಿಂದ ಹುಟ್ಟಿದ ಆಹಾರವನ್ನು ತಿನ್ನುವವರಿಗೆ 'ಶಾಕಾಹಾರಿಗಳು' ಎನ್ನುವರು, ಮತ್ತು ಪ್ರಾಣಿಗಳ ಮಾಂಸವನ್ನು ತಿನ್ನುವವರನ್ನು 'ಮಾಂಸಾಹಾರಿಗಳು' ಎಂದು ಹೇಳುವರು. ಹಾಲು, ಹಾಲಿನ ರೂಪಾಂತರಗಳಾದ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಇವೆಲ್ಲ ಪ್ರಾಣಿಗಳಿಂದಲೇ ಹುಟ್ಟುವವು. ಆದರೂ ಅವುಗಳಿಗೆ 'ಮಾಂಸಾಹಾರ' ಎನ್ನುವದಿಲ್ಲ. ಯಾಕೆಂದರೆ ಹಾಲನ್ನು ಹಿಂಡುವದರಿಂದ ದನಕರುಗಳೂ ಆಡು—ಕುರಿಗಳೂ ಸಾಯುವದಿಲ್ಲ. ಹಾಲನ್ನೂ ಅದರ ರೂಪಾಂತರಗಳಾದ ಮೊಸರು, ಬೆಣ್ಣೆ ಮೊದಲಾದವನ್ನೂ ಶಾಕಾಹಾರಿ ಮಾಂಸಾಹಾರಿ ಈ ಎರಡೂ ವರ್ಗದ ಜನರು ಬಳಸುವರು.

ನಮ್ಮ ಆಹಾರವನ್ನು ಇನ್ನೊಂದು ರೀತಿಯಿಂದ ಪರೀಕ್ಷಿಸಿ, ಅದರಲ್ಲಿ ಬೇರೆ ಬೇರೆ ಗುಂಪುಗಳನ್ನು ಮಾಡುವರು. ನಮ್ಮ ಶರೀರವು ಬೇರೆ ಬೇರೆ ಘಟಕಗಳಿಂದ ಆಗಿರುವದು. ಆದ್ದರಿಂದ ಆಯಾ ಘಟಕಗಳನ್ನು ಪೂರಯಿಸು

ವದಕ್ಕೆ ಆಯಾ ಘಟಕಗಳುಳ್ಳ ಆಹಾರವೇ ಬೇಕಾಗುವದು. ಈ ದೃಷ್ಟಿಯಿಂದ ನೋಡಿದರೆ ನಮ್ಮ ಆಹಾರದಲ್ಲಿ (೧) ಸಾರಜನಕಗಳು (೨) ಪಿಷ್ಟಶರ್ಕರೆಗಳು (೩) ಸ್ನಿಗ್ಧಪದಾರ್ಥಗಳು (೪) ಕ್ಷಾರಗಳು ಎಂಬ ನಾಲ್ಕು ಪ್ರಕಾರಗಳು ಒಡೆದು




ಆಕೃತಿ ೨.

ಕಾಣುವವು. ಇವಲ್ಲದೆ (೫) ನೀರು ಸಹ ನಮ್ಮ ಶರೀರಕ್ಕೆ ಬೇಕು. ನಮ್ಮ ಶರೀರವನ್ನು ನಿರೋಗಿಯಾಗಿಡುವದಕ್ಕೆ (೬) ಜೀವಸತ್ತ್ವಗಳೂ ಬೇಕಾಗುವವು.




ಆಕೃತಿ ೩.

ಒಟ್ಟಿಗೆ ನಮ್ಮ ಶರೀರದ ಬೆಳವಣಿಗೆ, ಪೋಷಣೆ ಮತ್ತು ಸಂರಕ್ಷಣೆ ಎಂಬ ಮೂರು ಬಗೆಯ ಕಾರ್ಯಗಳು ಸರಿಯಾಗಿ ನಡೆಯುವದಕ್ಕೆ ನಮಗೆ ಮೇಲೆ ಹೇಳಿದ ಆರು ಬಗೆಯ ಆಹಾರಗಳು ಬೇಕು ಎಂದಂತಾಯಿತು.

# ೨. ನಮ್ಮ ಆಹಾರದ ಸಾಮುಗ್ರಿಗಳು

ಶಾಕಾಹಾರಿಗಳ ಆಹಾರದಲ್ಲಿ (೧) ತೃಣಧಾನ್ಯಗಳು ಎಂದರೆ ಗೋದಿ, ಜೋಳ, ಅಕ್ಕಿ ಮುಂತಾದವು. (೨) ಬೇಳೆಯ ಕಾಳುಗಳು (೩) ಹಸುರು ಕಾಯಿಪಲ್ಲೆಗಳು (೪) ಗಡ್ಡೆ-ಗೆಣಸುಗಳು (೫) ಹಣ್ಣುಹಂಪಲಗಳು ಎಂದು ಐದು ಮುಖ್ಯ ವರ್ಗಗಳಿರುವವು. ಅವುಗಳ ಬಗೆಗೆ ಕೆಲವು ಸಂಗತಿಗಳನ್ನು ತಿಳಿದುಕೊಳ್ಳುವಾ.

**ಗೋದಿ:**— ಗೋದಿಯಲ್ಲಿ ಹಿಟ್ಟು, ತೌಡು ಎಂದು ಎರಡು ಮುಖ್ಯ ಭಾಗಗಳಿರುವವು. ನಮ್ಮ ಜನರು ಸಾಮಾನ್ಯವಾಗಿ ಗೋದಿಯನ್ನು ಬೀಸಿ ಹಿಟ್ಟನ್ನಷ್ಟೇ ಬಳಕೆಗೆ ಉಳಿಸಿಕೊಂಡು, ತೌಡನ್ನು ದನಗಳಿಗೆ ಹಾಕುವರು, ಇಲ್ಲವೆ ಚೆಲ್ಲಿಬಿಡುವರು. ಇದು ತೀರ ತಪ್ಪು. ನಮ್ಮ ಶರೀರಕ್ಕೆ ಬೇಕಾಗುವ ಪೌಷ್ಟಿಕ ದ್ರವ್ಯಗಳು ಹಿಟ್ಟಗಿಂತಲೂ ತೌಡಿನಲ್ಲಿ ಹೆಚ್ಚಾಗಿರುವವು. ಆದ್ದರಿಂದ ತೌಡನ್ನು ಎಂದೂ ಚೆಲ್ಲಬಾರದು. ತೌಡು ಕಂದು ಬಣ್ಣದ್ದಿರುವದರಿಂದ ತೌಡು ಕೂಡಿದ ಹಿಟ್ಟಿನಿಂದ ಮಾಡಿದ ಪದಾರ್ಥಗಳು ಚೆಂದಕಾಣುವದಿಲ್ಲೆಂದು ಹೇಳಬಹುದು. ಹಾಗಿದ್ದರೆ ತೌಡನ್ನು ಬೇರೆ ತೆಗೆದು ಇಟ್ಟುಕೊಂಡು ಅದನ್ನು ಆಹಾರದಂತೆ ಉಪಯೋಗಿಸಿಕೊಳ್ಳಬೇಕು.

**ಅಕ್ಕಿ:**— ಅಕ್ಕಿಯಲ್ಲಿ ಇತರ ಆಹಾರಸಾಮುಗ್ರಿಯು ಕಡಮೆ; ಹಿಟ್ಟಿನ ಅಂಶವೇ ಹೆಚ್ಚು. ನಮ್ಮ ಜನರು ಅಕ್ಕಿಯನ್ನು ಬಳಸುವ ರೀತಿಯಿಂದ ಅದರಲ್ಲಿರುವ ಆಹಾರಸಾಮುಗ್ರಿಗಳು ಇನ್ನಿಷ್ಟು ಕಡಮೆಯಾಗಿ ಹೋಗುವವು. ಅಕ್ಕಿಯನ್ನು ತಳಿಸಿ ಬೆಳ್ಳಗೆ ಮಾಡುವದು ಮೊದಲನೆಯ ತಪ್ಪು. ಅನ್ನಕ್ಕೆ ಇಡುವ ಮೊದಲು ಅಕ್ಕಿಯನ್ನು ತಿಕ್ಕಿ ತಿಕ್ಕಿ ತೊಳೆದು ಕಚ್ಚನ್ನು ಚೆಲ್ಲಿ ಬಿಡುವದು ಎರಡನೆಯ ತಪ್ಪು. ಸಾಕಷ್ಟಕ್ಕಿಂತಲೂ ಹೆಚ್ಚು ನೀರನ್ನಿಟ್ಟು ಅನ್ನವನ್ನು ಕುದಿಸಿ ತಿಳಿಯನ್ನು ಬಸಿದುಬಿಡುವದು ಮೂರನೆಯ ತಪ್ಪು. ಹೀಗೆ ಮಾಡುವದರಿಂದ ಅಕ್ಕಿಯೊಳಗಿನ ಆಹಾರಾಂಶವೆಲ್ಲ ಹೋಗಿಬಿಟ್ಟು ನಿಃಸತ್ತ್ವಭಾಗವು ಮಾತ್ರ ಉಳಿಯುವದು. ಆದ್ದರಿಂದ ಹೀಗೆ ಎಂದೂ ಮಾಡಬಾರದು.

**ಜೋಳ:**— ಆಹಾರಸತ್ತ್ವದ ದೃಷ್ಟಿಯಿಂದ ಜೋಳವು ಅಕ್ಕಿ-ಗೋದಿ ಗಳ ನಡುವಿನ ಪದಾರ್ಥವೆಂದು ಹೇಳಬಹುದು. ಯಾಕೆಂದರೆ ಜೋಳದಲ್ಲಿ ಅಕ್ಕಿಗಿಂತಲೂ ಹೆಚ್ಚು, ಗೋದಿಗಿಂತಲೂ ಕಡಮೆ ಆಹಾರಸತ್ತ್ವವಿರುವದು.

ಇದರಲ್ಲಿ ಸಾರಜನಕ ಪದಾರ್ಥಗಳು ಹೆಚ್ಚಾಗಿ ಇರುವವು. ಗೋದಿ-ಜೋಳ ಗಳನ್ನು ಮನೆಯಲ್ಲಿಯೇ ಬೀಸಿ ಉಪಯೋಗಿಸುವದು ಉತ್ತಮ. ಗಿರಣಿ ಗಳಲ್ಲಿ ಬೀಸುವದರಿಂದ ಇವುಗಳಲ್ಲಿಯ ಆಹಾರಸತ್ತ್ವಗಳು ಸುಟ್ಟು ಹೋಗು-ವವು; ರುಚಿಯೂ ಕೆಡಮೆಯಾಗುವದು. ಭತ್ತವನ್ನು ಗಿರಣಿಗೆ ಹಾಕಿ ಅಕ್ಕಿಯು ಬೆಳ್ಳಗೆ ಚೆಂದಕಾಣುವಂತೆ ಪಾಲಿಶ್ ಮಾಡಿಸುವದರಿಂದ ಅದರಲ್ಲಿರುವ ಆಹಾರ-ಸತ್ತ್ವವು ನಷ್ಟವಾಗುವದು. ಇಂತಹ ಅಕ್ಕಿಯನ್ನು ಉಪಯೋಗಿಸುವದು ಎಂದೂ ಸರಿಯಲ್ಲ. ಕೈಯಿಂದ ಕುಟ್ಟಿದ ಅಕ್ಕಿ, ಮನೆಯಲ್ಲಿ ಬೀಸಿದ ಹಿಟ್ಟು ಇವೇ ಹೆಚ್ಚು ರುಚಿಕರವಾದ ಮತ್ತು ಪೌಷ್ಟಿಕವಾದ ಆಹಾರಸಾಮುಗ್ರಿಗಳಾಗಿರು ವವು.

**ಬೇಳೆಗಳು:—** ತೊಗರಿಯ ಬೇಳೆಯು ಸಾಮಾನ್ಯವಾಗಿ ಎಲ್ಲರೂ ಉಪಯೋಗಿಸುವ ವಸ್ತು. ಕಡಲೆ, ಹೆಸರು, ಉದ್ದು, ಅಲಸಂದಿ, ಅವರೆ ಮೊದಲಾದ ಬೇಳೆಯ ಕಾಳುಗಳನ್ನೂ ಆಹಾರದಂತೆ ಉಪಯೋಗಿಸುವದುಂಟು. ಇವುಗಳಿಗೆ ಅಕ್ಕಡಿಕಾಳು ಎನ್ನುವರು.

ಬೇಳೆಯಲ್ಲಿ ಸಾರಜನಕ ಪದಾರ್ಥಗಳು ಹೆಚ್ಚಾಗಿರುವವು. ಬೇಳೆಯನ್ನು ಚೆನ್ನಾಗಿ ಬೇಯಿಸುವದರಿಂದ ಅದು ಪಚನಕ್ಕೆ ಹಗುರಾಗುವದು. ಬೇಯಿಸಿದ ಬೇಳೆಯಲ್ಲಿ ತುಸು ಪ್ರಮಾಣದಿಂದ ಮಸಾಲೆಯ ಪದಾರ್ಥವನ್ನು ಕೂಡಿಸಿ ಉಪಯೋಗಿಸಿವರೆ ಹೆಚ್ಚು ಕೆಡುಕಲ್ಲ. ಆದರೆ ಮನಬಂದಂತೆ ಕಾರ-ಮಸಾಲೆ ಗಳನ್ನು ಕೂಡಿಸಿ ಸೇವಿಸಿದರೆ ಅದರಿಂದ ಪಚನಶಕ್ತಿಯು ಕೆಟ್ಟುಹೋಗುವದು. ಬೇಳೆಯಿಂದ ಮಾಡಿದ ಪದಾರ್ಥಗಳ ಸಂಗಡ ತುಪ್ಪವನ್ನು ಅಥವಾ ಬೆಣ್ಣೆಯನ್ನು ಕೂಡಿಸಿ ಉಪಯೋಗಿಸುವದು ತುಂಬ ಹಿತಕರವಾಗಿರುವದು.

**ಗಡ್ಡೆ-ಗೆಣಸುಗಳು:—** ಬಟಾಟೆ, ಗೆಣಸು ಮುಂತಾದ ಗಡ್ಡೆಗಳನ್ನೂ ಮೂಲಂಗಿ, ನವಲಕೋಲ, ಗಜ್ಜರಿ ಮೊದಲಾದ ಪಲ್ಲೆಯ ಪದಾರ್ಥಗ ಳನ್ನೂ ನಾವು ಅಡಿಗೆಗೆ ಉಪಯೋಗಿಸುತ್ತೇವೆ. ಗೆಣಸನ್ನು ಬೇಯಿಸಿ ತಿನ್ನುವುದುಂಟು. ಈ ಪದಾರ್ಥಗಳಲ್ಲಿ ನೀರು ಮತ್ತು ಪಿಷ್ಟಗಳು ಹೆಚ್ಚಾಗಿ ಇರುವವು. ಗಡ್ಡೆ-ಗೆಣಸುಗಳು ಶುದ್ಧವಾದ ಆಹಾರ ಎಂದು ಹೇಳುವರು. ಏಕಾದಶಿ ಮುಂತಾದ ವ್ರತಗಳನ್ನು ಹಿಡಿದವರು ಅಕ್ಕಿ, ಜೋಳ, ಗೋದಿ ಮೊದಲಾದ ಧಾನ್ಯಗಳನ್ನು ಉಪಯೋಗಿಸದೆ, ಬರಿಯ ಗಡ್ಡೆ-ಗೆಣಸುಗಳನ್ನೇ ತಿಂದು ಇರುವರು. ಹಸಿಯ ಗಡ್ಡೆ-ಗೆಣಸುಗಳು ಪೌಷ್ಟಿಕವಾಗಿದ್ದರೂ ಅವನ್ನು ಬೇಯಿಸಿ ಉಪಯೋಗಿಸುವದೇ ಹೆಚ್ಚು ಹಿತಕರವಾಗಿರುವದು. ಹಸಿ

ಗೆಣಸುಗಳಿಗೆ ಹೆಚ್ಚು ಮಸಾಲೆಯನ್ನು ಸೇರಿಸಿ ಉಪಯೋಗಿಸುವದು ಒಳಿತಲ್ಲ.

**ಹಸುರು ಕಾಯಿಪಲ್ಲೆಗಳು:**— ಬದನೆ, ಬೆಂಡೆ, ಹೀರೆ, ಪಡುವಲ ಕುಂಬಳ, ಸವುತೆ, ಹಾಗಲ ಮುಂತಾದ ಹಸುರು ಕಾಯಿಪಲ್ಲೆಗಳನ್ನು ನಿತ್ಯ ದಿನದ ಆಹಾರದಲ್ಲಿ ಉಪಯೋಗಿಸುತ್ತೇವೆ. ಇವುಗಳನ್ನು ತಾಜಾ ಇರುವಾಗಲೇ ಉಪಯೋಗಿಸಬೇಕು. ಕೊಳೆತ ಇಲ್ಲವೆ ಒಣಗಿದ ಪಲ್ಲೆಯ ಪದಾರ್ಥಗಳು ದೇಹಕ್ಕೆ ಹಿತಕರವಲ್ಲ. ಹಳ್ಳಿಗಳಲ್ಲಿ ಜನರು ಬದನೆ, ಬೆಂಡೆ, ಸವುತೆ ಮೊದಲಾದ ಕಾಯಿಪಲ್ಲೆಗಳನ್ನು ಆಗಲೇ ಹರಿದು ಹಸಿಯಿರುವಾಗಲೇ ತಿನ್ನುವರು ಉಳ್ಳಿಗಡ್ಡೆಯನ್ನಂತೂ ರೊಟ್ಟಿಯ ಸಂಗಡ ಹಾಗೆಯೆ ತಿನ್ನುವದುಂಟು. ಹೀಗೆ ತಾಜಾ ಕಾಯಿಪಲ್ಲೆಗಳನ್ನು ಸೇವಿಸುವದು ಬಹಳ ಒಳ್ಳೆಯದು; ಯಾಕೆಂದರೆ ಕುದಿಸಿದಾಗ ಅವುಗಳೊಳಗಿನ ಜೀವಸತ್ತ್ವಗಳು ನಾಶವಾಗುವ ಸಂಭವವುಂಟು ಬೆಂಡೆಯ ಕಾಯಿಯಲ್ಲಿ ಜೀವಸತ್ತ್ವವು ಹೆಚ್ಚು ಪ್ರಮಾಣದಿಂದ ಇರುವದು ಶರೀರಕ್ಕೆ ಬೇಕಾಗುವ ಕ್ಷಾರಗಳೂ ಇವುಗಳಿಂದ ದೊರೆಯುವವು.

**ತೊಪ್ಪಲು ಪಲ್ಲೆಗಳು:**— ಮೆಂತೆ, ಹರಿವೆ, ರಾಜಗಿರಿ, ಕಿರ್ಕಸಾಲಿ ಮೊದಲಾದ ಸೊಪ್ಪುಗಳನ್ನು ನಾವು ಉಪಯೋಗಿಸುತ್ತೇವೆ. ಸಬ್ಬಸಿಗೆ, ಹಕ್ಕರಿಕೆ, ಕ್ಯಾಬೀಜ, ಚಕ್ಕೋತ್ರ, ಪುಂಡಿ, ಮೂಲಂಗಿಯ ತೊಪ್ಪಲ—ಇವುಗಳನ್ನೂ ನಾವು ಉಪಯೋಗಿಸುತ್ತೇವೆ. ಪಲ್ಲೆಗಳಲ್ಲಿ ಕೆಲವನ್ನು ಬೇಯಿಸಿ ಅಡಿಗೆ ಮಾಡುವೆವು. ಮತ್ತೆ ಕೆಲವನ್ನು ಹಸಿಬೇಳೆಯ ಸಂಗಡ ಕೂಡಿಸಿ ಪಚಡಿಮಾಡಿ ಉಪಯೋಗಿಸುವೆವು. ಕುದಿಸಿದ ಪಲ್ಲೆಗಿಂತೂ ಬೇಯಿಸದೆ ಮಾಡಿದ ಪಚಡಿಗಳು ಹೆಚ್ಚು ಆರೋಗ್ಯಕರವಾಗಿರುವವು. ಯಾಕೆಂದರೆ ತೊಪ್ಪಲುಪಲ್ಲೆಗಳಿಂದ ನಮಗೆ ಮುಖ್ಯವಾಗಿ ಜೀವಸತ್ತ್ವಗಳು ದೊರೆಯುವವು. ಬೇಯಿಸುವದರಿಂದ ಆ ಜೀವಸತ್ತ್ವಗಳು ನಷ್ಟವಾಗುವ ಸಂಭವವುಂಟು. ತೊಪ್ಪಲುಪಲ್ಲೆಗಳಿಂದ, ನಮ್ಮ ಶರೀರಕ್ಕೆ ಬೇಕಾಗುವ ಕ್ಷಾರಗಳೂ ಕಬ್ಬಿಣವೂ ದೊರೆಯುವವು. ಕಿರ್ಕಸಾಲಿ ಸೊಪ್ಪು ವಾತರೋಗವುಳ್ಳವರಿಗೆ ತುಂಬ ಹಿತಕರವಾಗಿರುವದು.

ಪಲ್ಲೆಯ ಪದಾರ್ಥಗಳನ್ನು ತೊಳೆದು ಸ್ವಚ್ಛ ಮಾಡಿದ ತರುವಾಯವೆ ಉಪಯೋಗಿಸಬೇಕು. ಹುಳಹತ್ತಿದ ಪಲ್ಲೆಯ ಪದಾರ್ಥಗಳನ್ನು ಉಪಯೋಗಿಸದಿರುವುದೇ ಒಳಿತು. ಒಂದು ವೇಳೆ ಉಪಯೋಗಿಸಬೇಕಾಗಿದ್ದರೆ ಅವನ್ನು ತುಂಬ ಎಚ್ಚರದಿಂದ ಸ್ವಚ್ಛಮಾಡಿ ತೊಳೆದು ಉಪಯೋಗಿ

ಸಬೇಕು. ಇಂಥ ತೊಪ್ಪಲುಗಳಲ್ಲಿರುವ ಕ್ರಿಮಿಕೀಟಕಗಳು ಆಯಾ ಎಲೆಗಳ ಬಣ್ಣದವೇ ಇರುವದರಿಂದ ಅವು ತಟ್ಟನೆ ನಮಗೆ ಕಾಣಿಸುವದಿಲ್ಲ.

**ಹಣ್ಣು-ಹಂಪಲಗಳು:—** ಬಾಳೆಯ ಹಣ್ಣು ಎಲ್ಲ ಕಾಲಗಳಲ್ಲಿಯೂ ದೊರೆಯುವ ಉತ್ತಮವಾದ ಹಣ್ಣು. ಇದರಲ್ಲಿ ಫಾಸ್ಫರಸವೂ ಜೀವ-ಸತ್ತ್ವಗಳೂ ಇರುವದರಿಂದ ತುಂಬ ಆರೋಗ್ಯಕರವಾಗಿರುವದು. ಮಾವಿನ ಹಣ್ಣು ತುಂಬ ರುಚಿಕರವಾಗಿರುವದು; ಅದರಲ್ಲಿ ಸಕ್ಕರೆಯ ಅಂಶವು ಹೆಚ್ಚಾಗಿರುವದು. ದಾಳಿಂಬ, ಪೇರಲ, ದ್ರಾಕ್ಷೆ, ಚಿಕ್ಕು ಮೊದಲಾದ ಹಣ್ಣುಗಳು ಪೌಷ್ಟಿಕವೂ ರುಚಿಕರವೂ ಆಗಿರುವವು. ಪ್ರತಿ ದಿನ ಊಟವಾದ ಮೇಲೆ ತುಸು ಹಣ್ಣನ್ನು ತಿನ್ನುವದು ಆರೋಗ್ಯದ ದೃಷ್ಟಿಯಿಂದ ಅತಿಶಯ ಹಿತಕರವಾಗಿರುವದು. ಮುಸುಂಬಿ, ಕಂಚಿ, ಕಿತ್ತಳೆ ಮೊದಲಾದ ಹಣ್ಣುಗಳು ಬೇನೆಯವರಿಗೂ ಪಚನ-ವಾಗುವಂತಹ ಗುಣವುಳ್ಳವುಗಳಾಗಿವೆ. ಜಡವಾದ ಆಹಾರವನ್ನು ಕೊಡಬಾರದಂಥ ಸಂದರ್ಭದಲ್ಲಿ ರೋಗಿಗಳಿಗೆ ಮುಸಂಬಿಹಣ್ಣಿನ ರಸವನ್ನೇ ಆಹಾರದಂತೆ ಕೊಡಬೇಕೆಂದು ಡಾಕ್ಟರರು ಹೇಳುವರು. ಚಿಕ್ಕ ಮಕ್ಕಳಿಗೆ ಕಿತ್ತಳೆ ಹಣ್ಣಿನ ರಸವನ್ನು ಕೊಟ್ಟರೆ ಹಿತಕರವೆಂದು ಹೇಳುತ್ತಾರೆ.

ಹಣ್ಣುಗಳಲ್ಲಿ ಜೀವಸತ್ತ್ವಗಳೂ ಕ್ಷಾರಗಳೂ ಹೆಚ್ಚಾಗಿ ಇರುವವು. ಅಂಜೂರ, ಉತ್ತತ್ತಿ, ದ್ರಾಕ್ಷೆ ಮುಂತಾದ ಹಣ್ಣುಗಳನ್ನು ಒಣಗಿದ ಮೇಲೆಯೂ ಉಪಯೋಗಿಸುತ್ತಾರೆ.

ಕೊಳೆತ ಹಣ್ಣನ್ನು ಎಂದೂ ಉಪಯೋಗಿಸಬಾರದು. ಕೊಳೆತ ಭಾಗವನ್ನಷ್ಟೆ ಕೊಯ್ದು ಚೆಲ್ಲಿ ಉಳಿದ ಭಾಗವನ್ನು ಉಪಯೋಗಿಸುವದು ಸಹ ಹಿತಕರವಲ್ಲ. ಸಾಕಷ್ಟು ಪಕ್ವವಾಗದಿರುವ ಕಸುಗಾಯಿಗಳು ತಿನ್ನುವುದಕ್ಕೆ ಒಂದು ಬಗೆಯಿಂದ ರುಚಿ ಎನಿಸಿದರೂ ಪಚನಕ್ಕೆ ಜಡವಾಗಿರುವದರಿಂದ ಅಂತಹ ಕಾಯಿ-ಗಳನ್ನು ಉಪಯೋಗಿಸಬಾರದು.

**ಮೊಳಕೆಯೊಡೆದ ಕಾಳುಗಳು:—** ಹೆಸರು, ಅಲಸಂದಿ, ಮಡಕಿ ಮುಂತಾದ ಬೇಳೆಯ ಕಾಳುಗಳನ್ನು ನೆನೆಯಿಟ್ಟು, ಮೊಳಕೆಯೊಡೆದ ಬಳಿಕ ಅವುಗಳಿಂದ ಉಸುಳಿ ಮುಂತಾದ ಊಟದ ಸಾಮುಗ್ರಿಗಳನ್ನು ತಯಾರಿಸುವ ಪದ್ಧತಿಯು ನಮಗೆ ಹೊಸದಲ್ಲ. ಕಾಳುಗಳನ್ನು ಹಾಗೆ ಮೊಳಕೆಯೊಡೆಯಿಸು-ವದರಿಂದ ಅವುಗಳಲ್ಲಿರುವ ಜೀವಸತ್ತ್ವಗಳೇ ಮೊದಲಾದ ಆಹಾರ ಸಾಮುಗ್ರಿಗಳು ಚೇತನಹೊಂದಿ ನಮ್ಮ ಶರೀರಕ್ಕೆ ಬೇಗನೆ ಉಪಯೋಗವಾಗುವ ಸ್ಥಿತಿಗೆ ಬಂದಿರುವವು.

ಇಂತಹ ಕಾಳುಗಳನ್ನು ಒಂದು ಇಡಿ ರಾತ್ರಿ ನೀರಲ್ಲಿ ನೆನೆಯಿಟ್ಟು ಮರುದಿನ ಅರಿವೆಯಲ್ಲಿ ಗಂಟುಕಟ್ಟಿ ತೂಗಬಿಡುವರು. ಅಥವಾ ನೆಲದ ಮೇಲೆ ಒತ್ತಟ್ಟಿಗೆ ಗುಂಪುಗೂಡಿಸಿ, ಮೇಲೆ ಒದ್ದೆಯ ಬಟ್ಟೆಯನ್ನು ಹೊದಿಸಿ ಇಡುವರು. ಹೀಗೆ ಮಾಡುವದರಿಂದ ಅವು ಮೊಳಕೆಯೊಡೆದು ತಯಾರಾಗುವವು. ಅವುಗಳಿಂದ ಉಸುಳಿಯನ್ನು ಮಾಡುವರು. ಮೊಳಕೆಯು ಹೆಚ್ಚು ದೊಡ್ಡದಾದರೆ ಕಾಳು ಒಗರಾಗಿರುವದು. ಕೆಲವರು ಇಂತಹ ಕಾಳನ್ನು ತಿಕ್ಕಿ ಮೊಳಕೆಯನ್ನು ತರಿದುಚೆಲ್ಲುವರು. ಇದು ಸರಿಯಲ್ಲ. ಸಾಕಷ್ಟೇ ಮೊಳಕೆಯೊಡೆದ ಕಾಳು ಪಚನಕ್ಕೆ ಹಗುರಾಗಿರುವದು. ಇಂತಹ ಕಾಳನ್ನು ಮತ್ತೆ ನೀರಲ್ಲಿ ಬೇಯಿಸಿ ನೀರು ಬಸಿಯುವದು ಸರಿಯಲ್ಲ. ಮೊಳಕೆಯೊಡೆದ ಕಾಳಿನಿಂದ ಮಾಡಿದ ಪದಾರ್ಥಗಳು ರುಚಿಕಟ್ಟಾಗಿರುವವು, ಮತ್ತು ಪಚನಕ್ಕೆ ಯೋಗ್ಯವಾಗಿರುವವು. ಇಷ್ಟೇ ಅಲ್ಲ, ಅವುಗಳಲ್ಲಿರುವ ಜೀವಸತ್ತ್ವ ಮೊದಲಾದ ಆಹಾರಸಾಮುಗ್ರಿಗಳು ನಮ್ಮ ಶರೀರಕ್ಕೆ ಸರಿಹೋಗುವಂತೆ ತಯಾರಾಗಿರುವವು.

**ಮಾಂಸಾಹಾರ:**— ತತ್ತಿ-ಮೀನು-ಮಾಂಸಗಳು ಮಾಂಸಾಹಾರದ ಮುಖ್ಯ ಪದಾರ್ಥಗಳು. ತತ್ತಿಯಲ್ಲಿ ಬಿಳಿಯ ಭಾಗ, ಹಳದಿಯ ಭಾಗ ಹೀಗೆ ಎರಡು ಮುಖ್ಯ ಭಾಗಗಳಿರುವವು. ಮೇಲಿನ ಚಿಪ್ಪು ಆಹಾರಕ್ಕೆ ಉಪಯೋಗವಾಗುವದಿಲ್ಲ. ಬಿಳಿಯ ಭಾಗವು ಆಲ್ಬ್ಯುಮಿನ್ ಎಂಬ ದ್ರವ್ಯವಾಗಿರುವದು. ಹಳದೀಭಾಗದಲ್ಲಿ ಸಾರಜನಕ ಪದಾರ್ಥವೂ ನೆಣವೂ ಕೂಡಿರುವವು; ಕ್ಷಾರಗಳೂ ಅಲ್ಪ ಪ್ರಮಾಣದಿಂದ ಇರುವವು. ಆದರೆ ಇದರಲ್ಲಿ ಸಕ್ಕರೆಯ ಅಂಶವಿರುವದಿಲ್ಲ. ತತ್ತಿಯಲ್ಲಿ ಸಾರಜನಕ, ನೆಣ ಮತ್ತು 'ಡ' ಜೀವಸತ್ತ್ವಗಳು ಕೂಡಿರುವದರಿಂದ, ಇದು ಒಳ್ಳೆಯ ಆಹಾರವೆನಿಸುತ್ತದೆ. ಬೇಯಿಸಿದ ತತ್ತಿಗಿಂತ ತಾಜಾ ತತ್ತಿಯು ಸುಲಭವಾಗಿ ಪಚನವಾಗುವದು.

**ಮೀನು:**— ಮೀನಿನಲ್ಲಿ ನೆಣದ ಭಾಗವು ಮಾಂಸಕ್ಕಿಂತ ಕಡಮೆ ಇರುವದರಿಂದ ಮೀನು ಸುಲಭವಾಗಿ ಪಚನವಾಗುವದು. ಮೀನಿನಲ್ಲಿ ಫಾಸ್ಫರಸದ ಅಂಶವು ಹೆಚ್ಚಾಗಿರುವದು. ಕಾಡ್ ಎಂಬ ಮೀನು 'ಡ' ಜೀವಸತ್ತ್ವವನ್ನು ಹೆಚ್ಚಾಗಿ ಸಂಗ್ರಹಿಸಿಕೊಳ್ಳುವದು. ಅದರಿಂದ ತಯಾರಿಸಿದ ಎಣ್ಣೆಯು ಉತ್ತಮ ಆಹಾರವೆನಿಸಿಕೊಳ್ಳುತ್ತದೆ. ಮೀನವನ್ನು ತಾಜಾ ಇರುವಾಗಲೇ ಉಪಯೋಗಿಸುವದು ಒಳಿತು.

**ಮಾಂಸ:**— ಪ್ರಾಣಿಗಳ ಮಾಂಸದಲ್ಲಿ ಸಾರಜನಕವೂ ನೆಣವೂ ಹೆಚ್ಚು ಪ್ರಮಾಣದಿಂದ ಇರುವವು. ಕುರಿ-ಆಡು-ದನಗಳ ಮಾಂಸವು ಕೆಂಪಾಗಿರುವದು. ಕೋಳಿಗಳ ಮಾಂಸವು ನಸುಬೆಳ್ಳಗಿರುವದು. ಕೆಂಪು ಮಾಂಸದಲ್ಲಿ ಬಿಳಿಯ ಮಾಂಸಕ್ಕಿಂತ ನೆಣದ ಭಾಗವು ಕಡಮೆ ಇರುವದು. ಅಶಕ್ತಪ್ರಕೃತಿಯವರಿಗೆ ಕೆಂಪು ಮಾಂಸವು ಸುಲಭವಾಗಿ ಪಚನವಾಗುವದರಿಂದ ಅದು ಒಳ್ಳೆಯ ಆಹಾರವೆನಿಸುತ್ತದೆ. ಮಾಂಸವನ್ನು ಹೆಚ್ಚು ನೀರುಕೂಡಿಸಿ ಕುದಿಸಿದರೆ ಅದು ಬಿರುಸಾಗಿ ಪಚನಕ್ಕೆ ಜಡವಾಗುವದು.

## ಅಭ್ಯಸನಗಳು

೧ ಗೋದಿ-ಅಕ್ಕಿಗಳನ್ನು ಉಪಯೋಗಿಸುವಾಗ ಯಾವ ಮಾತಿನ ಕಡೆಗೆ ವಿಶೇಷ ಲಕ್ಷ್ಯಕೊಡಬೇಕು ?

೨. ಕೈಯಿಂದ ಕುಟ್ಟಿದ ಅಕ್ಕಿ, ಮನೆಯಲ್ಲಿ ಬೀಸಿದ ಹಿಟ್ಟು, ಇವುಗಳ ಮಹತ್ತ್ವವೇನು ?

೩. ತಾಜಾ ಕಾಯಿಪಲ್ಲೆ-ಸೊಪ್ಪುಗಳನ್ನು ಉಪಯೋಗಿಸುವದು ಒಳಿತು, ಯಾಕೆ ?

೪. ಮಾಂಸಕ್ಕಿಂತ ಮೀನು ಬೇಗನೆ ಪಚನವಾಗುವದು, ಯಾಕೆ ? ಅಶಕ್ತಪ್ರಕೃತಿಯವರಿಗೆ ಹಿತಕರವಾದ ಮಾಂಸವು ಯಾವದು ?

## ೩. ಸಮತೂಕ ಆಹಾರ

ನಮಗೆ ಆಹಾರವು ಬೇಕು—ಎಂದು ಸಿಕ್ಕಂತೆ ಅದನ್ನು ಸೇವಿಸುವದರಿಂದ ಸರಿಯಾಗಿ ಉಪಯೋಗವಾಗಲಾರದು. ಆಹಾರದ ಘಟಕಗಳು ಬೇರೆ ಬೇರೆ ಪದಾರ್ಥಗಳಲ್ಲಿ ಹೆಚ್ಚುಕಡಮೆ ಪ್ರಮಾಣದಲ್ಲಿ ಇರುವವು. ಆದ್ದರಿಂದ ಅವನ್ನೆಲ್ಲ ಸೇರಿಸಿ ಒಂದು ಸರಿಯಾದ ಅಳತೆಯಿಂದ ಉಪಯೋಗಿಸಿದರೆ ಮಾತ್ರ ಒಳಿತಾಗುವದು. ಶರೀರಕ್ಕೆ ಬೇಡಾದ ಆಹಾರವನ್ನು ಹೆಚ್ಚಿಗೆ ಸೇವಿಸಿದರೂ ಕೆಡಕು; ಬೇಕಾದ ಆಹಾರವನ್ನು ಕಡಮೆ ಸೇವಿಸಿದರೂ ಹಿತವಾಗದು. ನಿತ್ಯದಲ್ಲಿ ಕುಳಿತುಕೊಂಡೇ ಕೆಲಸ ಮಾಡುವವರು ಮಿತಿಮೀರಿ ಹಾಲು–ತುಪ್ಪಗಳನ್ನು ತಿನ್ನುವದರಿಂದ ಅವರ ಶರೀರದಲ್ಲಿ ಬೊಜ್ಜು ಬೆಳೆದು ಮೈಯೆಲ್ಲ ಭಾರವಾಗುವದು. ಬಡಕೂಲಿಕಾರನು, ಸಾಕಷ್ಟು ಪೌಷ್ಟಿಕ ಆಹಾರವು ಸಿಗದೆ ಇದ್ದರೆ, ಸೊರಗಿ ಕಡ್ಡಿಯಾಗುವನು. ಆದ್ದರಿಂದ ಮನುಷ್ಯರು ನಿರೋಗಿಗಳಾಗಿ, ಸಾಕಷ್ಟು ಶಕ್ತಿಯುಳ್ಳವರಾಗಿ, ಬಲವಾದ ಶರೀರವನ್ನು ಕಟ್ಟಿಕೊಳ್ಳಬೇಕಾದರೆ, ಕೆಲವೊಂದು ಅಳತೆಯನ್ನು ಗೊತ್ತುಮಾಡಿಕೊಂಡು ಆಹಾರವನ್ನು ತಕ್ಕೊಳ್ಳಬೇಕಾಗುವದು. ನಮ್ಮ ಅಡಿಗೆಯ ಪದ್ಧತಿಯಲ್ಲಿ ಈ ಮಾತನ್ನು ಲಕ್ಷ್ಯದಲ್ಲಿಟ್ಟುಕೊಳ್ಳಲಾಗಿದೆ ಎಂದು ಹೇಳಬಹುದು. ಅಕ್ಕಿಯ ಅನ್ನ, ರೊಟ್ಟಿ, ಚಪಾತಿ, ಬೇಳೆಯ ಹುಳಿ, ಹಾಲು, ಮೊಸರು, ತುಪ್ಪ, ಉಪ್ಪು, ಮಸಾಲೆಗಳು, ಕಾಯಿಪಲ್ಲೆ, ತೊಪ್ಪಲುಪಲ್ಲೆ ಇವೆಲ್ಲ ಸಾಮಗ್ರಿಗಳು ಸಾಮಾನ್ಯ ತರಗತಿಯ ಜನರ ಮನೆಯ ಅಡಿಗೆಯಲ್ಲಿ ಸೇರಿರುವವು.

ಸಮತೂಕ ಆಹಾರದ ಬಗೆಗೆ ಮಾತಾಡುವಾಗ ಬೇರೆ ಬೇರೆ ಜನರಿಗೆ ಸಂಬಂಧಿಸಿದ ಬೇರೆ ಬೇರೆ ಸಂಗತಿಗಳನ್ನು ಆಲೋಚಿಸಬೇಕಾಗುವದು : ಹೊಲದಲ್ಲಿ ದುಡಿಯುವ ಒಕ್ಕಲಿಗನಿಗೂ ಅಂಗಡಿಯಲ್ಲಿಯ ವ್ಯಾಪಾರಿಗೂ ಒಂದೇ ತರದ ಆಹಾರವನ್ನು ಕೊಟ್ಟರೆ ಹೇಗೆ ನಡೆದೀತು ? ಅದರಂತೆ ಯಾವಾಗಲೂ ಚಟುವಟಿಕೆಯುಳ್ಳ ಮಕ್ಕಳಿಗೂ, ಮುದುಕರಿಗೂ ಒಂದೇ ಅಳತೆಯ ಆಹಾರ ಹೇಗೆ ಸಾಗಬೇಕು ?

ವಯಸ್ಸು, ಶರೀರಮಾನ, ಅವರವರು ಮಾಡುವ ಕೆಲಸ ಮೊದಲಾದ ಅನೇಕ ಸಂಗತಿಯನ್ನು ನೋಡಿಕೊಂಡು ಆಹಾರದ ಪ್ರಮಾಣದಲ್ಲಿ ಹೆಚ್ಚು ಕಡಮೆ ಮಾಡ ಬೇಕಾಗುವದು. ಆದರೆ ಈ ಎಲ್ಲ ತರದ ಆಹಾರಪದಾರ್ಥಗಳು ಕೂಡಿದಾಗಲೇ ಅದು ಯೋಗ್ಯ ಆಹಾರವಾಗುವದು ಎಂಬದನ್ನು ಮಾತ್ರ ಮರೆಯಬಾರದು.

## ಅಭ್ಯಸನಗಳು

೧. ಶಾಕಾಹಾರಿಗಳ ಮತ್ತು ಮಾಂಸಾಹಾರಿಗಳ ಆಹಾರದಲ್ಲಿ ಏನು ಹೆಚ್ಚು ಕಡಮೆಯಿದೆ?

೨. 'ಸಮತೂಕ ಆಹಾರ' ಎಂದರೇನು?

೩. ನಮ್ಮ ಅಡಿಗೆಯ ಪದ್ಧತಿಯಲ್ಲಿ ಸಮತೂಕ ಆಹಾರದ ಗುಟ್ಟನ್ನು ಲಕ್ಷ್ಯದಲ್ಲಿ ಇಟ್ಟುಕೊಂಡಂತೆ ಕಂಡುಬರುವದು; ಅದು ಹೇಗೆ?


TATA GRANT IA
DHARWAR

## ೪. ಹಾಲೂ ಅದರ ರೂಪಾಂತರಗಳೂ

ಪ್ರಾಣಿಗಳ ಸಂತಾನಕ್ಕೆ ತಾಯಿಯ ಹಾಲೇ ಮುಖ್ಯ ಆಹಾರವೆಂಬುದು ನಮಗೆ ಗೊತ್ತಿದೆ. ಪ್ರಾಣಿಗಳಲ್ಲಿ ಮೊಲೆಯುಣಿಸುವ ಪ್ರಾಣಿಗಳು, ಮೊಲೆಯುಣಿಸದ ಪ್ರಾಣಿಗಳು ಎಂದು ಎರಡು ವರ್ಗಗಳಿರುವವು. ಮೊಲೆಯುಣಿಸುವ ಪ್ರಾಣಿಗಳ ಸಂತಾನಕ್ಕೆ, ಅವು ಬೆಳೆದು ಸ್ವತಂತ್ರವಾಗಿ ಆಹಾರವನ್ನು ದೊರಕಿಸಿ ಬದುಕುವವರೆಗೂ ತಾಯಿಯು ತನ್ನ ಹಾಲನ್ನು ಉಣಿಸಿ ಬೆಳೆಸುವದು. ಮನುಷ್ಯರೂ ಹುಟ್ಟಿದಂದಿನಿಂದ ಕೆಲವು ದಿನಗಳವರೆಗೆ ತಾಯಿಯ ಹಾಲನ್ನು ಕುಡಿದು ಬದುಕುವರಲ್ಲವೆ? ತಾಯಿಯ ಹಾಲು ಕುಡಿಯುವಾಗ ಮಕ್ಕಳಿಗೆ ಬೇರೆ ಆಹಾರವು ಬಹುಶಃ ಬೇಕಾಗುವದೇ ಇಲ್ಲ. ಆದ್ದರಿಂದ ಹಾಲು ಪರಿಪೂರ್ಣವಾದ ಆಹಾರ ಎನ್ನಿಸಿಕೊಳ್ಳುತ್ತದೆ.

ಹಾಲಿನಲ್ಲಿ ಶರೀರದ ಪೋಷಣೆಗೂ ಬೆಳವಣಿಗೆಗೂ ಬೇಕಾಗುವ ಎಲ್ಲ ಆಹಾರಸಾಮುಗ್ರಿಗಳು ಸರಿಯಾದ ಪ್ರಮಾಣದಲ್ಲಿ ಕೂಡಿಕೊಂಡಿರುವವು. ಅಶಕ್ತರಿಗೂ ಬೇನೆಯವರಿಗೂ ಹಾಲಿನಷ್ಟು ಒಳ್ಳೆಯ ಆಹಾರವು ಬೇರೊಂದಿಲ್ಲ. ಹಾಲಿನಲ್ಲಿ ಕೊಬ್ಬು, ನೀರು, ಸಾರಜನಕಗಳು, ಕ್ಷಾರಗಳು, ಪಿಷ್ಟ-ಶರ್ಕರೆಗಳು ಜೀವ-ಸತ್ತ್ವಗಳು—ಇವೆಲ್ಲ ಶರೀರದ ಬೆಳವಣಿಗೆಗೆ ಅವಶ್ಯವಿರುವ ಪ್ರಮಾಣದಲ್ಲಿ ಕೂಡಿಕೊಂಡಿರುವವು.

ನಾವು ತಾಯಿಯ ಹಾಲನ್ನು ಕುಡಿದು ಬೆಳೆಯುವೆವು. ಆ ಮೇಲೆ ಆಕಳು-ಎಮ್ಮೆಗಳ ಹಾಲು ಬಳಸುವೆವು. ಕುರಿ-ಆಡು-ಒಂಟೆಗಳ ಹಾಲನ್ನು ಬಳಸುವವರೂ ಇದ್ದಾರೆ.

ತಾಯಿಯ ಹಾಲಿನಲ್ಲಿ ಇರುವಷ್ಟು ಸಕ್ಕರೆಯ ಅಂಶವು ದನಗಳ ಹಾಲಿನಲ್ಲಿ ಇರುವದಿಲ್ಲ. ಆದ್ದರಿಂದ ಕೂಸುಗಳಿಗೆ ದನಗಳ ಹಾಲು ಕುಡಿಸುವಾಗ ಅದನ್ನು ಕಾಯಿಸಿ ಸೋಸಿ ತುಸು ಸಕ್ಕರೆ ಬೆರಸಿ ಕುಡಿಸುವರು.

ಹಾಲು ಶುದ್ಧವಾಗಿರದಿದ್ದರೆ ಅದರಿಂದ ಅನೇಕ ರೋಗಗಳು ಬರುವ ಸಂಭವವುಂಟು. ಆದ್ದರಿಂದ ಶುದ್ಧವಾದ ಹಾಲನ್ನು ದೊರಕಿಸಬೇಕಾದರೆ ಈ ಕೆಳಗಿನ ಸೂಚನೆಗಳನ್ನು ಲಕ್ಷ್ಯದಲ್ಲಿಟ್ಟುಕೊಂಡಿರಬೇಕು.

(೧) ಹಾಲುಕೊಡುವ ದನಗಳು ನಿರೋಗಿಯಾಗಿದ್ದು ಕಸುವಿನಿಂದ ಬೆಳೆದವು ಇರಬೇಕು. ರೋಗಿಷ್ಟದನಗಳ ಹಾಲು ಆಹಾರಕ್ಕೆ ಒಳ್ಳೆಯದಲ್ಲ.

(೨) ಹಾಲು ಕರೆಯುವವರು ತಮ್ಮ ಕೈಗಳನ್ನು ಸ್ವಚ್ಛವಾಗಿಟ್ಟುಕೊಂಡಿರ ೕಕು. ಕರೆಯುವಾಗ ದನಗಳ ಕೆಚ್ಚಲನ್ನೂ ಮೊಲೆಗಳನ್ನೂ ಸ್ವಚ್ಛವಾಗಿ ೊಳೆಯಬೇಕು.

(೩) ಹಾಲು ಕರೆಯಿಸುವ, ಅದನ್ನು ಸಾಗಿಸುವ ಮತ್ತು ಅಳೆಯುವ ಪಾತ್ರೆಗಳು ನಿರ್ಮಲವಾಗಿರಬೇಕು.

(೪) ದನದ ಮನೆಯು ಯಾವಾಗಲೂ ಸ್ವಚ್ಛವಾಗಿರಬೇಕು. ದನಗಳ ಮೈಗೆ ಉಣ್ಣೆ ಮೊದಲಾದವು ಹತ್ತಿರಬಾರದು.

(೫) ಹಾಲನ್ನು ಸೋಸಿ, ಸಳಮಳ ಕಾಯಿಸದೆ ಉಪಯೋಗಿಸಬಾರದು.

(೬) ಹಾಲಿಗೆ ನೀರು ಸೇರಿಸುವ ಸಂದರ್ಭದಲ್ಲಿ ನಿರ್ಮಲವಾದ ನೀರನ್ನೇ ಸೇರಿಸಬೇಕು.

(೭) ಚಿಕ್ಕಮಕ್ಕಳಿಗೆ ಹಾಲುಕುಡಿಸಲು ಹಾಲಿನ ಬಾಟಲಿಗಳನ್ನೇ ಉಪಯೋಗಿಸಬೇಕು. ಆಗ ಬಾಟಲಿಯೂ ರಬ್ಬರಿನ ತುದಿಯೂ ನಿರ್ಮಲ ವಾಗಿರುವಂತೆ ನೋಡಿಕೊಳ್ಳಬೇಕು.

ಹಾಲಿನಿಂದ ಮೊಸರು-ಮಜ್ಜಿಗೆ-ಬೆಣ್ಣೆಗಳನ್ನು ತಯಾರಿಸುವರು. ನಾವು ಅವುಗಳನ್ನು ನಮ್ಮ ಆಹಾರಕ್ಕಾಗಿ ಉಪಯೋಗಿಸುವೆವು.

ಕೆನೆ:- ಹಾಲನ್ನು ತುಸುಹೊತ್ತು ಇಟ್ಟರೆ ಅದು ಕೆನೆಗಟ್ಟುವದು; ಕಾಯಿಸಿ ಆರಿಸಿದಾಗ ಹೆಚ್ಚು ಕೆನೆ ಬರುವದು. ಕೆನೆಯಲ್ಲಿ ಹಾಲಿನ ಸತ್ತ್ವವೆಲ್ಲ ಕೂಡಿರುವ ದೆಂದು ಹೇಳಬಹುದು.

**ಬೆಣ್ಣೆ ತೆಗೆದ ಹಾಲು:**- ಹಾಲನ್ನು ಕಡೆದು ಬೆಣ್ಣೆಯನ್ನು ತೆಗೆಯುವರು. ಹೀಗೆ ಬೆಣ್ಣೆ ತೆಗೆದ ಹಾಲನ್ನು ಬೇರೆ ಬೇರೆ ಕೆಲಸಗಳಿಗೆ ಬಳಸುವರು.

**ಮೊಸರು:**- ಹಾಲಿಗೆ ಹೆಪ್ಪುಹಾಕಿ ಮೊಸರನ್ನು ತಯಾರಿಸುವರು. ಹಾಲಿ ಗಿಂತ ಮೊಸರು ಸುಲಭವಾಗಿ ಪಚನವಾಗುವದು. ಆದರೆ ಮೊಸರು ಹೆಚ್ಚು ಹುಳಿಯಾಗುವದು ಒಳಿತಲ್ಲ. ಹುಳಿಯಾಗದಿರುವ ಮೊಸರನ್ನು ತುಸು ಕಡೆದು, ಬೆಣ್ಣೆ ತೆಗೆಯದೆ ಅರೆಗಡೆದ ಮಜ್ಜಿಗೆಯನ್ನು ಬೇನೆಯವರೂ ಅಶಕ್ತ ಪ್ರಕೃತಿಯ ವರೂ ಉಪಯೋಗಿಸುವದು ಒಳಿತು.

**ಬೆಣ್ಣೆ:**- ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆಯುವರು. ಬೆಣ್ಣೆಯಲ್ಲಿ ಕೊಬ್ಬು, ಸಾರಜನಕಗಳು, ಕ್ಷಾರಗಳು ಇರುವವು; 'ಅ' ಜೀವಸತ್ತ್ವವೂ ಹೆಚ್ಚು ಪ್ರಮಾಣದಿಂದ ಇರುವದು.

**ತುಪ್ಪ:**- ಬೆಣ್ಣೆಯನ್ನು ಕಾಯಿಸಿ ಶುದ್ಧ ಮಾಡಿದರೆ ತುಪ್ಪವಾಗುವದು. ತುಪ್ಪವು ಪೌಷ್ಟಿಕ ಆಹಾರವಾಗಿರುವದು.

ಹಾಲೂ ಅದರ ರೂಪಾಂತರಗಳಾದ ಕೆನೆ, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ—ಇವೆಲ್ಲ ಆರೋಗ್ಯಕರವಾದ ಆಹಾರಸಾಮಗ್ರಿಗಳೆಂದು ಹೇಳುವರು. ದನ-ಕುರಿಗಳನ್ನು ಸಾಕಿ ಹಾಲನ್ನು ದೊರಕಿಸಿಕೊಳ್ಳಬಹುದು. ದೊಡ್ಡ

ಪಟ್ಟಣಗಳಿಗಿಂತ ಹಳ್ಳಿಗಳಲ್ಲಿ ಇವನ್ನು ಸಾಕುವದಕ್ಕೆ ಹೆಚ್ಚು ಅನುಕೂಲವಿರುವದು. ಹಳ್ಳಿಗಳಲ್ಲಿ ದನಗಳು ಮೇಯುವದಕ್ಕೆ ಬೇಕಾದ ಹುಲ್ಲುಗಾವಲು ಇರುವದು. ಕೂಲಿಯು ಕಡಮೆ; ದನಗಳ ಆಹಾರವೂ ಕಡಮೆ ಬೆಲೆಗೆ ದೊರೆಯುವದು. ಒಕ್ಕಲಿಗರು ಹೊಲಗೆಲಸದ ಸಂಗಡವೇ ದನಗಳನ್ನು ಸಾಕುವ ಉದ್ಯೋಗವನ್ನೂ ಮಾಡಬಹುದು.

ಹಾಲನ್ನೂ ಮಜ್ಜಿಗೆಯನ್ನೂ ಒಳ್ಳೆಯ ಪೇಯದಂತೆಯೂ ಉಪಯೋಗಿಸುವರು. ಬೇಸಗೆಯಲ್ಲಿ ಮಜ್ಜಿಗೆಯು ತುಂಬ ಆರೋಗ್ಯಕರವಾದ ಪೇಯವೆನಿಸುವದು. ಹಳ್ಳಿಗಳಲ್ಲಿ ಜನರು ಮಜ್ಜಿಗೆಯನ್ನು ಊಟದಲ್ಲಿಯೂ ಉಪಯೋಗಿಸುವರು. ಇದು ಅವರಿಗೆ ಹಿತಕರವಾದ ಆಹಾರವಾಗಿರುವದು.

## ಅಭ್ಯಾಸಗಳು

೧. ಹಾಲು ಶುದ್ಧವಾಗಿರುವದಕ್ಕೆ ಯಾವ ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟಿರಬೇಕು.
೨. ಹಾಲು ಪರಿಪೂರ್ಣವಾದ ಆಹಾರವೆನಿಸುತ್ತದೆ. ಹೇಗೆ ?
೩. ಹಾಲಿನಿಂದ ತಯಾರಾಗುವ ಬೇರೆ ಬೇರೆ ಆಹಾರಸಾಮಗ್ರಿಗಳನ್ನು ವಿವರಿಸಿರಿ.

---

## ೫. ಜೀವಸತ್ತ್ವಗಳು

ನಾವು ಉಣ್ಣುವ ಆಹಾರವು ಜೀರ್ಣವಾಗಿ, ಶರೀರಕ್ಕೆ ಬಲವನ್ನೂ ಉಷ್ಣತೆ-ಉತ್ಸಾಹಗಳನ್ನೂ ಕೊಡುವದು; ಅದು ಶರೀರವನ್ನು ಪೋಷಿಸಿ ಬೆಳೆಸುವದು ಎಂಬುದು ನಿಮಗೆ ಗೊತ್ತಿದೆ. ಇಷ್ಟರಿಂದಲೇ ನಾವು ಆರೋಗ್ಯವಂತರಾಗಿ ಬಾಳಲಾರೆವು. ಜನರು ನಾನಾ ತರದ ರೋಗಗಳಿಂದ ಬಳಲುತ್ತಿರುವದು ನಿಮಗೆ ಗೊತ್ತಿದೆ. ಇಂತಹ ರೋಗಗಳಿಂದ ಶರೀರವನ್ನು ಕಾಪಾಡುವದೂ ಒಂದು ಮಹತ್ತ್ವದ ಕಾರ್ಯವಾಗಿದೆ; ಎಂದರೆ ನಮಗೆ ರೋಗಗಳು ಬಾರದಂತೆ ಮಾಡುವದೂ, ಬಂದ ರೋಗಗಳನ್ನು ಗುಣಪಡಿಸುವದೂ ಅವಶ್ಯವಾಗಿದೆ. ಇದಕ್ಕಾಗಿ ರೋಗಗಳನ್ನು ಪ್ರತಿಬಂಧಿಸುವ ಶಕ್ತಿಯು ನಮ್ಮ ಶರೀರಕ್ಕೆ ಇರಬೇಕು. ಈ ಶಕ್ತಿಯನ್ನು ಜೀವಸತ್ತ್ವಗಳು ಕೊಡುವವು; ಎಂದಬಳಿಕ ಜೀವಸತ್ತ್ವಗಳ ಮಹತ್ತ್ವ ಎಷ್ಟಿದೆ ಎಂಬುದು ನಮಗೆ ಗೊತ್ತಾಗುವದಲ್ಲವೇ ? ಈ ಜೀವಸತ್ತ್ವಗಳ ಬಗೆಗೆ ಕೆಲವು ಸಂಗತಿಗಳನ್ನು ನಾವು ತಿಳಿದುಕೊಳ್ಳೋಣ.

ಈ ವಿಷಯುವನ್ನು ಚೆನ್ನಾಗಿ ಅಭ್ಯಾಸಮಾಡಿದ ಶಾಸ್ತ್ರಜ್ಞರು ಜೀವಸತ್ತ್ವಗಳಲ್ಲಿ ಐದು ಪ್ರಕಾರಗಳನ್ನು ಗೊತ್ತುಮಾಡಿದ್ದಾರೆ. ಮತ್ತು ಅವಕ್ಕೆ ಅ. ಬ. ಕ. ಡ. ಇ. ಜೀವಸತ್ತ್ವಗಳೆಂದು ಹೆಸರು ಕೊಟ್ಟಿದ್ದಾರೆ.

**ಅ. ಜೀವಸತ್ತ್ವ:**-- ಅ. ಜೀವಸತ್ತ್ವವು ನಮ್ಮ ಶರೀರದ ಸರಿಯಾದ ಬೆಳೆ-ವಣಿಗೆಗೂ, ಚಲನವಲನಗಳಿಂದ ಆದ ಸವಕಳಿಯನ್ನು ಪೂರಯಿಸುವ




ಆಕೃತಿ ೬.




ಆಕೃತಿ ೭.

ದಕ್ಕೂ ಅವಶ್ಯವಾಗಿ ಬೇಕಾಗುವದು. ಅ. ಜೀವಸತ್ತ್ವವುಳ್ಳ ಆಹಾರವನ್ನು ನಾವು ಸಾಕಷ್ಟು ತೆಗೆದುಕೊಳ್ಳದಿದ್ದರೆ, ಶರೀರದೊಳಗಿನ ರೋಗಗಳನ್ನು ತಡೆಯುವ ಶಕ್ತಿಯು ಕಡಮೆಯಾಗುವದು. ಕಣ್ಣಿನ ಬೇನೆಯು ಬರುವದು.

ಹುರುಕು, ಕಜ್ಜಿ ಮೊದಲಾದ ಚರ್ಮರೋಗಗಳು ಹುಟ್ಟುವವು. ನೆಗಡಿ-ಕೆಮ್ಮು ಮೊದಲಾದ ಬೇನೆಗಳೂ ಬರುವವು. ಒಳ್ಳೆಯ ಹಾಲು, ತಾಜಾ ಕಾಯಿ—ಪಲ್ಲೆಗಳು, ಮಾವಿನಹಣ್ಣು, ಬೆಣ್ಣೆ, ತತ್ತಿ, ಮೀನು, 'ಕಾಡ್' ಹಾಗು ಶಾರ್ಕ್ ಜಾತಿಯ ಮೀನಿನ ಎಣ್ಣೆ ಇವುಗಳಲ್ಲಿ 'ಅ' ಜೀವಸತ್ತ್ವವು ಹೆಚ್ಚಾಗಿ ಇರುವದು.

**ಬ. ಜೀವಸತ್ತ್ವ**:— ಬ. ಜೀವಸತ್ತ್ವವು ನಮ್ಮ ಶರೀರದೊಳಗಿನ ನರಗಳ ಸರಿಯಾದ ಬೆಳೆವಣಿಗೆಗೆ ಅವಶ್ಯವಾಗಿ ಬೇಕು. ಬ. ಜೀವಸತ್ತ್ವವುಳ್ಳ ಆಹಾರಗಳನ್ನು ನಾವು ಸಾಕಷ್ಟು ಸೇವಿಸದಿದ್ದರೆ, ನಮ್ಮ ಶರೀರವು ಕ್ಷೀಣವಾಗುವದು. ಹಸಿವೆಯು ಕಟ್ಟುವದು; ನರಗಳಿಗೆ ಸಂಬಂಧಿಸಿದ 'ಬೆರಿಬೆರಿ' ಎಂಬ ರೋಗವು ಹುಟ್ಟುವದು; ಕಟ್ಟಕಡೆಗೆ ಅರ್ಧಾಂಗವಾಯು ಎಂಬ ಭಯಂಕರ ರೋಗವೂ ಬರಬಹುದು. ಧಾನ್ಯಗಳ ತವುಡಿನಲ್ಲಿ ಬ. ಜೀವಸತ್ತ್ವವು ಹೆಚ್ಚಾಗಿ ಇರುವದು. ಮೊಳಕೆಯೊಡೆದ ಕಾಳುಗಳು, ಹಾಲು, ಬಟಾಟೆ, ಟೊಮೆಟೋ ಹಣ್ಣು, ಉಳ್ಳೇಗಡ್ಡೆ, ಗಜ್ಜರಿ ಮೊದಲಾದ ಪಲ್ಲೆಯ ಪದಾರ್ಥಗಳು—ಇವುಗಳಲ್ಲಿಯೂ ಬ. ಜೀವಸತ್ತ್ವವು ಇರುವದು. ಗೋದಿಯನ್ನು ಗಿರಣಿಯಲ್ಲಿ ಬೀಸಿ ತವುಡು ಸಾಣಿಸಿ ಚೆಲ್ಲುವದರಿಂದ, ಅದರಲ್ಲಿರುವ ಜೀವಸತ್ತ್ವವು ಕಳೆದುಹೋಗುವದು. ಭತ್ತವನ್ನು ಗಿರಣಿಯಲ್ಲಿ ಪಾಲಿಶ್ ಮಾಡಿಸುವದರಿಂದ ಬ. ಜೀವಸತ್ತ್ವವು ಹೋಗಿ ಅಕ್ಕಿಯು ನಿಸ್ಸತ್ತ್ವವಾಗುವದು. ಆದ್ದರಿಂದ ಮನೆಯಲ್ಲಿ ಬೀಸಿದ ಹಿಟ್ಟು, ಕುಟ್ಟಿದ ಅಕ್ಕಿ ಇವನ್ನೇ ನಾವು ಯಾವಾಗಲೂ ಉಪಯೋಗಿಸಬೇಕು.

**ಕ. ಜೀವಸತ್ತ್ವ**:— ಕ. ಜೀವಸತ್ತ್ವವೂ ನಮ್ಮ ಆರೋಗ್ಯಕ್ಕೆ ಒಂದು ಮಹತ್ತ್ವದ ಸಾಧನವಾಗಿರುವದು. ನಮ್ಮ ಆಹಾರದಲ್ಲಿ ಕ. ಜೀವಸತ್ತ್ವದ ಕೊರತೆಯಾದರೆ 'ಸ್ಕರ್ವಿ' ಎಂಬ ಬೇನೆಯು ಬರುವದು. ಹಲ್ಲಿನ ಒಸಡೆಗಳು ಉಬ್ಬಿ ರಕ್ತವು ಸೋರುವದು. ಆಗಾಗ ಮೂಗುಬಿಚ್ಚಿ ರಕ್ತವು ಸುರಿಯುವದು. ಪಾದದ ಗಂಟುಗಳು ಬಾಯುವವು. ಲಿಂಬೆಹಣ್ಣಿನ ರಸ, ಪಪಾಯಿ, ಮಾವು, ಮೋಸಂಬಿ, ಕಿತ್ತಳೆ ಮೊದಲಾದ ಹಣ್ಣುಗಳಲ್ಲಿಯೂ, ರಾಜಗಿರಿ, ಹರಿವೆ ಮೊದಲಾದ ಸೊಪ್ಪುಗಳಲ್ಲಿಯೂ ಕ. ಜೀವಸತ್ತ್ವವು ಹೆಚ್ಚಾಗಿ ಇರುವದು. ಮೊಳಕೆಯೊಡೆದ ಕಾಳುಗಳಲ್ಲಿ ಕ. ಜೀವಸತ್ತ್ವವು ಜಾಗ್ರತವಾಗಿರುವದು. ಅವರೆ-ಬಟ್ಟಗಡಲೆಗಳಲ್ಲಿ ಕ. ಜೀವಸತ್ತ್ವವು ಹೆಚ್ಚು ಪ್ರಮಾಣದಿಂದ ಇರುವದು. ಕ. ಜೀವಸತ್ತ್ವವುಳ್ಳ ಪದಾರ್ಥಗಳನ್ನು ಬೇಯಿಸಿದರೆ ಅಥವಾ ಬಿಸಿಲಲ್ಲಿ ಒಣಗಿಸಿದರೆ, ಅವುಗಳೊಳಗಿನ ಜೀವಸತ್ತ್ವಗಳ ಕಸುವು ಕಡಮೆಯಾಗುವದು. ಹೆಚ್ಚು ಬೇಯಿಸಿ ನೀರು ಬಸಿಯುವದರಿಂದಂತೂ ಅವು ನಾಶವಾಗಿ ಹೋಗುವವು; ಆದ್ದರಿಂದಲೇ ಮೂಲಂಗಿಯ ತೊಪ್ಪಲು ಮೊದಲಾದುವು

ಗಳನ್ನು ತಾಜಾ ಇರುವಾಗಲೇ ತಿನ್ನುವದು ಹಿತಕರವಾಗಿರುವದು. ನೆಲ್ಲಿಯ ಕಾಯಿಯಲ್ಲಿ ಈ ಸತ್ತ್ವವು ತುಂಬಿರುವದು.




ಆಕೃತಿ ೮.

ಡ. ಜೀವಸತ್ತ್ವ:— ನಮ್ಮ ಶರೀರದೊಳಗಿನ ಎಲುವುಗಳು ಸರಿಯಾಗಿ ಬೆಳವಣಿಗೆ ಹೊಂದಬೇಕಾದರೆ ಡ. ಜೀವಸತ್ತ್ವವು ಬೇಕು. ಚಿಕ್ಕಮಕ್ಕಳ ಆಹಾರದಲ್ಲಿ ಡ. ಜೀವಸತ್ತ್ವದ ಕೊರತೆಯಾದರೆ, ಅವರ ಶರೀರದಲ್ಲಿ




ಆಕೃತಿ ೯.

ಎಲುವುಗಳು ಬೆಳವಣಿಗೆ ಹೊಂದುವದಿಲ್ಲ. ಆಗ ಆ ಮಕ್ಕಳಿಗೆ 'ಮುಟ್ಟು ದೋಷ' (ರಿಕೆಟ್ಸ್) ಎಂಬ ಎಲುವಿನ ಕ್ಷೀಣತೆಯ ರೋಗ ಬರುವದು. ಹಲ್ಲು

ಬರುವ ಅವಧಿಯಲ್ಲಿ ಮಕ್ಕಳಿಗೆ ಡ. ಜೀವನಸತ್ತ್ವವುಳ್ಳ ಆಹಾರವನ್ನು ಚೆನ್ನಾಗಿ ಪೂರಯಿಸಲೇ ಬೇಕು. ಹಾಲು, ಬೆಣ್ಣೆ, ತತ್ತಿ, ಕಾಡ್‌ಲಿವ್ಹರ ಎಣ್ಣೆ ಇವುಗಳಲ್ಲಿ ಡ. ಜೀವನಸತ್ತ್ವವಿರುವದು. ಸೂರ್ಯನ ಪ್ರಕಾಶದ ಸಹಾಯದಿಂದ ನಮ್ಮ ಶರೀರದಲ್ಲಿ ಡ. ಜೀವಸತ್ತ್ವವು ಹುಟ್ಟುವದು. ಅದ್ದರಿಂದ ಚಿಕ್ಕಮಕ್ಕಳನ್ನು ಬಿಸಿಲಲ್ಲಿ ಆಡುವದಕ್ಕೆ ಬಿಡುವದು ಒಳಿತು.

**ಇ. ಜೀವಸತ್ತ್ವ:—** ಇ. ಜೀವಸತ್ತ್ವವು ಶರೀರದಲ್ಲಿ ಕಡಮೆಯಾದರೆ ಹೆಣ್ಣುಮಕ್ಕಳಿಗೆ ಬಂಜೆತನ ಬರುವದು. ಸಂತತಿಯ ಬೆಳವಣಿಗೆಗೆ ಇ. ಜೀವ




ಆಕೃತಿ ೧೦

ಸತ್ತ್ವವು ಬೇಕೇಬೇಕು. ಹಾಲು, ಬೆಣ್ಣೆ, ಗೋಧಿ, ಮೊಳಕೆಯೊಡೆದ ಧಾನ್ಯಗಳು, ಮಾಂಸ, ಕಾಡ್ ಮಿಾನಿನ ಎಣ್ಣೆ—ಇವುಗಳಲ್ಲಿ ಇ. ಜೀವಸತ್ತ್ವವು ಹೆಚ್ಚಾಗಿ ಇರುವದು.

ಜೀವಸತ್ತ್ವವುಳ್ಳ ಆಹಾರಗಳನ್ನು ಸಾಕಷ್ಟು ಸೇವಿಸಿದರೆ ನಾವು ಆರೋಗ್ಯವಂತರಾಗಿ ಬಾಳುವೆವು. ಇಂತಹ ಆಹಾರಗಳನ್ನು ಬಳಸುವ ಕ್ರಮವು ಕೂಡ ಯೋಗ್ಯವಾದದ್ದಿರಬೇಕು. ಕುದಿಸುವದು, ಒಣಗಿಸುವದು, ತಳಿಸಿ ತವುಡು ಕೇ ಚೆಲ್ಲುವದು ಮುಂತಾದ ಕೃತ್ರಿಮರೀತಿಯಿಂದ ಆಹಾರ ಪದಾರ್ಥಗಳೊಳಗಿನ ಜೀವಸತ್ತ್ವಗಳು ನಾಶವಾಗದಂತೆ, ಯಾವಾಗಲೂ ಎಚ್ಚರದಿಂದ ಇರಬೇಕು. ಹಣ್ಣುಹಂಪಲಗಳನ್ನೂ ಕಾಯಿಪಲ್ಲೆ-ತೊಪ್ಪಲುಪಲ್ಲೆಗಳನ್ನೂ ಇದ್ದಂತೆಯೇ ಉಪಯೋಗಿಸಿದರೆ, ಜೀವಸತ್ತ್ವಗಳು ನಮಗೆ ಸರಿಯಾಗಿ ದೊರೆಯುವವು. ಬಾಳೆಹಣ್ಣುಗಳನ್ನು ಸಿಪ್ಪೆ ಸಹಿತವಾಗಿ ತಿನ್ನುವದು ಒಳಿತು.

## ಅಭ್ಯಸನಗಳು

೧. ಜೀವಸತ್ತ್ವಗಳಲ್ಲಿ ಎಷ್ಟು ಪ್ರಕಾರಗಳಿವೆ ?

೨. ಜೀವಸತ್ತ್ವಗಳು ಶರೀರದಲ್ಲಿ ಯಾವ ಕಾರ್ಯಗಳನ್ನು ಮಾಡುವವು ?

೩. 'ಇ' ಜೀವಸತ್ತ್ವವು ನಮ್ಮ ಶರೀರಕ್ಕೆ ಯಾಕೆ ಬೇಕು ? ಅದು ಹೆಚ್ಚಾಗಿ ಇರುವ ಪದಾರ್ಥಗಳನ್ನು ಹೇಳಿರಿ.

೪. ಜೀವಸತ್ತ್ವಗಳು ನಮಗೆ ಪೂರ್ಣವಾಗಿ ದೊರೆಯಬೇಕಾದರೆ ನಾವು ಆಹಾರ ವನ್ನು ಹೇಗೆ ಉಪಯೋಗಿಸಬೇಕು ?

೫. ಬೇಯಿಸಿದ ಪಲ್ಲೆಗಳಿಗಿಂತ ಪಚಡಿಗಳು ಆರೋಗ್ಯಕರವಾಗಿರುವವು; ಯಾಕೆ ?

---

# ಚಟಗಳೂ ಅವುಗಳಿಂದಾಗುವ ಕೆಟ್ಟ ಪರಿಣಾಮಗಳೂ

## ೧. ತಂಬಾಕು

ಮನುಷ್ಯರಿಗೆ ಉಣ್ಣುವದಕ್ಕೆ ಅನ್ನ, ತೊಡುವದಕ್ಕೆ ಬಟ್ಟೆ, ಇರುವದಕ್ಕೆ ಮನೆ— ಇವು ಮೂರು ಮೂಲ ಆವಶ್ಯಕತೆಗಳು. ಇವು ದೊರೆತ ಬಳಿಕ ಅವರಿಗೆ ನಾನಾಬಗೆಯ ಸೊಗಸುಗಾರಿಕೆಯ ಮೇಲೆ ಆಶೆ ಹುಟ್ಟುವುದು. ಕೆಲಸ ಮಾಡಿ ದಣಿದಾಗ ಯಾವುದಾದರೊಂದು ಬಗೆಯ ವಿಶ್ರಾಂತಿಯು ಬೇಕೆನ್ನಿಸು ವದು. ಇಂತಹ ಸಂದರ್ಭಗಳಲ್ಲಿ ಮನುಷ್ಯರಿಗೆ ಅನೇಕ ತರದ ಚಟಗಳು ಅಂಟಿ ಕೊಳ್ಳುವದುಂಟು. ತಂಬಾಕಿನ ಚಟವು ಇಂತಹ ಚಟಗಳಲ್ಲಿ ಒಂದು.

ಕೆಲವರು ತಂಬಾಕನ್ನು ಸೇದುವರು. ಕೆಲವರು ಎಲೆ–ಅಡಿಕೆಯ ಸಂಗಡ ತಿನ್ನುವರು. ನಸ್ಯವನ್ನು ಏರಿಸುವ ಜನರೂ ಇದ್ದಾರೆ. ಅಂತೂ ಈ ಮೂರರಲ್ಲಿ ಯಾವ ರೀತಿಯಿಂದ ತಂಬಾಕನ್ನು ಬಳಸಿದರೂ ಅದು ನಮ್ಮ ಶರೀರಕ್ಕೆ ಅಪಾಯವನ್ನು ಮಾಡುವದೇ ಹೊರತು ಯಾವ ಹಿತವನ್ನೂ ಮಾಡುವ ದಿಲ್ಲ. ಆದರೂ ತೀರ ತಿಳಿಯದ ಜನರನ್ನು ಮೊದಲುಗೊಂಡು ವಿದ್ಯಾವಂತರ ವರೆಗಿನ ಎಲ್ಲ ಬಗೆಯ ಜನರು ತಂಬಾಕಿನ ಚಟಕ್ಕೆ ಒಳಗಾಗಿರುವರು.

ತಂಬಾಕಿನ ಚಟವು ನಮ್ಮ ಶರೀರದ ಮೇಲೆ ಅನೇಕ ರೀತಿಯಿಂದ ಕೆಟ್ಟ ಪರಿಣಾಮಗಳನ್ನು ಮಾಡುವದು; ಇದರಿಂದ ಹಣವೂ ಹಾಳಾಗುವದು. ಆದರೂ ಕೆಲವರು ಈ ಚಟಕ್ಕೆ ಅಂಟಿಕೊಳ್ಳುವದನ್ನು ನೋಡಿದರೆ ದುಃಖ ವಾಗುವದು. ತಂಬಾಕಿನ ಚಟವು ಹೆಚ್ಚು ಬಳಕೆಯಲ್ಲಿ ಬಂದಿರುವದರಿಂದ

ಸಮಾಜದಲ್ಲಿ ಈ ಚಟಕ್ಕೆ ಯಾವ ತಿರಸ್ಕಾರವು ಇಲ್ಲದಂತಾಗಿದೆ. ಹೆಚ್ಚು ಕಲಿತವರು ಎನ್ನುವವರಲ್ಲಂತೂ ಈ ಚಟವು ಒಂದು ಗೌರವದ ಮಾತಾಗಿದೆ. ಇದು ದುಃಖದ ಸಂಗತಿಯೇ ಸರಿ.

ತಂಬಾಕಿನ ಚಟವು ಒಬ್ಬರಿಂದ ಇನ್ನೊಬ್ಬರಿಗೆ ಅಂಟಿಕೊಳ್ಳುವದು. ಯಾವದಾದರೊಂದು ರೋಗವು ಅಂಟಿಕೊಂಡರೆ ಅದನ್ನು ಔಷಧ–ಪಥ್ಯಗಳಿಂದ ಕಳೆಯಬಹುದು; ಆದರೆ ತಂಬಾಕಿನ ಚಟಕ್ಕೆ ಯಾವ ಔಷಧವೂ ಇಲ್ಲ; ಪಥ್ಯವೂ ಇಲ್ಲ. ಆದುದರಿಂದ ಈ ಚಟವು ಅಂಟಿಕೊಳ್ಳದಂತೆ ಯಾವಾಗಲೂ ಎಚ್ಚರದಿಂದ ಇರಬೇಕು.

ತಂಬಾಕಿನಲ್ಲಿ 'ನಿಕೊಟಿನ್' ಎಂಬ ವಿಷಪದಾರ್ಥ ಇರುವದು. ತಂಬಾಕು ನಮ್ಮ ಶರೀರಕ್ಕೆ ಹಿತಮಾಡುವದಿಲ್ಲ—ಎಂಬುದಕ್ಕೆ ಬೇರೆ ಆಧಾರವೇ ಬೇಡ. ತಂಬಾಕಿನ ಒಂದು ಸಣ್ಣ ತುಂಡನ್ನು ಅದರ ಅಭ್ಯಾಸವಿಲ್ಲದವರು ಬಾಯಲ್ಲಿ ಹಾಕಿಕೊಂಡರೆ, ಓಕರಿಕೆ ಬಂದು ವಾಂತಿಯೇ ಆಗುವದು. ಹೆಚ್ಚು ತಿಂದರೆ ತಲೆ ತಿರುಗುವದು. ತಂಬಾಕಿನಲ್ಲಿರುವ ನಿಕೋಟಿನ್ ವಿಷವೇ ಇದಕ್ಕೆ ಕಾರಣ.

ತಂಬಾಕು ತಿನ್ನುವವರ ನಾಲಗೆಗೆ ಪದಾರ್ಥಗಳ ರುಚಿಯನ್ನು ಸರಿಯಾಗಿ ತಿಳಿದುಕೊಳ್ಳುವ ಶಕ್ತಿಯಿರುವದಿಲ್ಲ. ನಾವು ಉಣ್ಣುವ ಆಹಾರವನ್ನು ಪಚನ ಮಾಡುವದಕ್ಕೆ ನಮ್ಮ ಬಾಯೊಳಗಿನ ಜೊಲ್ಲು ಒಂದು ಮಹತ್ತ್ವದ ಸಾಧನ ವಾಗಿದೆ. ತಂಬಾಕು ತಿನ್ನುವವರ ಬಾಯೊಳಗಿನ ಜೊಲ್ಲಿನಲ್ಲಿ ಈ ಶಕ್ತಿಯು ಕಡಿಮೆಯಾಗಿರುವದು. ಆಗಾಗ ತಂಬಾಕು ತಿನ್ನುವವರ ಹೊಟ್ಟೆಯೊಳಗೆ ತಂಬಾಕಿನ ಅಂಶವು ಹೋಗುವದರಿಂದ ಅವರ ಪಚನಶಕ್ತಿಯು ಕುಂದಿಹೋಗು ವದು.

ತಂಬಾಕು ಸೇದುವದರಿಂದ ಪುಪ್ಪುಸಗಳ ಮೇಲೆ ಕೆಟ್ಟ ಪರಿಣಾಮ ವಾಗುವದು. ಹಳ್ಳಿಗಳಲ್ಲಿಯ ಜನರು ಚಿಲಿಮೆ, ಎಕ್ಕೆಯ ಎಲೆಯಿಂದ ಮಾಡಿದ ಬತ್ತಿ, ಮೊದಲಾದವುಗಳಲ್ಲಿ ತಂಬಾಕನ್ನು ತುಂಬಿ ಸೇದುವರು. ಚುಟ್ಟ–ಸಿಗರೇಟುಗಳನ್ನು ಸೇದುವವರಂತೂ ನಮಗೆ ಹೆಚ್ಚೆಚ್ಚಾಗಿ ಕಾಣಿಸುತ್ತಿ ರುವರು. ತಂಬಾಕು ಸೇದುವವರ ಹಾಗೂ ತಿನ್ನುವವರ ಬಾಯಿಯು ಹೊಲಸುನಾರುವದು. ತಂಬಾಕುಸೇದುವವರ ಪುಪ್ಪುಸಗಳು ಕೆಟ್ಟು ಕೆಮ್ಮು, ದಮ್ಮು ಮುಂತಾದ ಕಫದ ರೋಗಗಳು ಹುಟ್ಟುವವು. ಮಿತಿ-ಮಿಾರಿ ತಂಬಾಕನ್ನು ಸೇದಿ ಕ್ಷಯರೋಗಕ್ಕೆ ಆಶ್ರಯಕೊಟ್ಟ ಜನರೂ ಇದ್ದಾರೆ. ತಂಬಾಕಿನ ವಿಷದಿಂದ ಪಚನಶಕ್ತಿಯು ಕಡಿಮೆಯಾಗುವದಲ್ಲದೆ, ಅಶಕ್

ತೆಯೂ ಉಂಟಾಗುವದು. ತಂಬಾಕು ಸೇವಿಸುವಾಗ ಒಮ್ಮೆ ಏನೋ ಒಂದು ಬಗೆಯ ಉತ್ಸಾಹವು ಕಂಡುಬಂದರೂ, ತುಸುಹೊತ್ತಿನಲ್ಲಿಯೇ ಇಮ್ಮಡಿ ನಿರುತ್ಸಾಹವು ತಲೆದೋರುವದು. ಆಗ ಮತ್ತೆ ತಂಬಾಕನ್ನು ಸೇವಿಸಲೇ ಬೇಕಾಗುವದು.

ನಸ್ಯವನ್ನು ಏರಿಸುವ ಚಟವಿದ್ದವರಿಗೆ ಅದನ್ನು ಏರಿಸಿದ ಹೊರತು ಯಾವ ವಿಚಾರವೂ ತೋಚದಂತೆ ಮನಸ್ಸು ಮಂಕಾಗಿ ಬಿಡುವದಂತೆ. ನಸ್ಯವನ್ನು ಏರಿಸುವ ಚಟವಿದ್ದವರಿಗೆ ಸೂಕ್ಷ್ಮವಾಸನೆಗಳ ಜ್ಞಾನವೇ ಉಳಿಯುವದಿಲ್ಲ. ಅವರ ಮೂಗಿನೊಳಗಿನ ಜ್ಞಾನತಂತುಗಳು ತಂಬಾಕಿನ ವಿಷದಿಂದ ಮಂದವಾಗಿ, ಸೂಕ್ಷ್ಮವಾಸನೆಗಳನ್ನು ಗ್ರಹಿಸುವ ಶಕ್ತಿಯನ್ನು ಕಳೆದುಕೊಂಡಿರುವವು.

ಯಾವದೇ ರೀತಿಯಿಂದ ತಂಬಾಕನ್ನು ಉಪಯೋಗಿಸಿದರೂ, ನಮ್ಮ ಮುಖದ ಮೇಲಿನ ತೇಜಸ್ಸು ಕುಂದಿಹೋಗುವದು. ತಂಬಾಕು ಸೇದುವವರ ತುಟಿಗಳು ಕಪ್ಪಾಗಿಹೋಗುವವು. ಕಣ್ಣಿನ ಶಕ್ತಿಯೂ ಮಂದವಾಗುವದು. ಮೈಯಲ್ಲಿ ಆಲಸ್ಯವು ಹುಟ್ಟುವದು. ಅವರ ಎದೆಯ ಹಾರುವಿಕೆಯ ವೇಗವೂ ಕಡಮೆಯಾಗುವದು. ಈ ರೀತಿಯಾಗಿ ನಾನಾಬಗೆಯಿಂದ ನಮ್ಮ ಶರೀರಕ್ಕೆ ಕೆಡುಕನ್ನು ಮಾಡುವ ತಂಬಾಕಿನ ಚಟವನ್ನು ಹಚ್ಚಿಕೊಳ್ಳದಿರುವದು ಬುದ್ಧಿವಂತಿಕೆ— ಎಂಬವನ್ನು ಮರೆಯಬಾರದು. ತಂಬಾಕಿನ ಚಟದಿಂದ ಹಣವೂ ಹಾಳು; ಗುಣವೂ ಹಾಳು. ಆದ್ದರಿಂದ ಈ ಚಟದಿಂದ ದೂರ ಇರುವದಕ್ಕೆ ಎಲ್ಲರೂ ಯತ್ನಿಸಬೇಕು.

## ಅಭ್ಯಾಸನಗಳು

೧. ತಂಬಾಕನ್ನು ಯಾವ ಯಾವ ರೀತಿಗಳಿಂದ ಉಪಯೋಗಿಸುವರು ?

೨. ತಂಬಾಕುಸೇದುವವರಿಂದ ಯಾವ ದುಷ್ಪರಿಣಾಮಗಳಾಗುವವು ?

೩. 'ತಂಬಾಕು ನಮ್ಮ ಶರೀರಕ್ಕೆ ಹಿತಮಾಡುವದಿಲ್ಲ' ಎಂಬುದನ್ನು ಹೇಗೆ ಸಿದ್ಧ ಮಾಡಿ ತೋರಿಸಬಹುದು ?

೪. ಎಲೆ—ಅಡಿಕೆಯ ಸಂಗಡ ತಂಬಾಕು ತಿನ್ನುವದರಿಂದ ಹೇಗೆ ಕೆಡುಕಾಗುವದು ? ನಸ್ಯವನ್ನು ಯಾಕೆ ಏರಿಸಬಾರದು ?

---

## ೨. ಮಾದಕಪದಾರ್ಥಗಳು

ನಮ್ಮ ಶರೀರದ ಬೆಳೆವಣಿಗೆ, ಪೋಷಣೆ, ಮತ್ತು ಸಂರಕ್ಷಣೆ ಎಂಬ ಮೂರು ಮುಖ್ಯ ಕಾರ್ಯಗಳಿಗಾಗಿ ನಾವು ಉಣ್ಣಬೇಕು. ಆದರೆ ಕೆಲಕೆಲವು ಜನರು ಈ ಮೂರೂ ಮಹತ್ತ್ವದ ಸಂಗತಿಗಳಲ್ಲಿ, ಯಾವದೊಂದಕ್ಕೂ ಬೇಕಾಗ ದಿರುವ ಪದಾರ್ಥಗಳನ್ನು ಸೇವಿಸುವರು. ಸಿಂದಿ, ಸೆರೆ ಮುಂತಾದ ಅಮಲೇರುವ ಪದಾರ್ಥಗಳನ್ನು ಕುಡಿಯುವ ಜನರನ್ನು ನೀವು ಕಂಡಿರಬಹುದು, ಇಲ್ಲವೆ ಕೇಳಿರ ಬಹುದು. ಈಚೆಗೆ ಸರಕಾರದವರು ಕಾಯದೆ ಮಾಡಿ, ಇಂತಹ ಮಾದಕ ಪದಾರ್ಥಗಳನ್ನು ಸೇವಿಸುವವರಿಗೆ ಶಿಕ್ಷೆ ವಿಧಿಸುತ್ತಾರೆ. ಆದರೂ ಎಷ್ಟೋ ಜನರು ಕಳ್ಳತನದಿಂದ ಅವುಗಳನ್ನು ದೊರಕಿಸಿಕೊಂಡು ಕುಡಿಯುತ್ತಾರೆ. ನಮಗೆ ಈ ಸಂಗತಿ ಗೊತ್ತಾದರೆ, ನಾವು ಕೂಡಲೆ ಅದನ್ನು ಯೋಗ್ಯ ಅಧಿಕಾರಿಗಳಿಗೆ ತಿಳಿಸಬೇಕು. ಒಬ್ಬ ಮುದುಕನು ಜನರ ಕಣ್ಣು ತಪ್ಪಿಸಿ ದಿನಾಲು ಸೆರೆಯನ್ನು ಕುಡಿಯುತ್ತಿದ್ದನು. ಈ ಸಂಗತಿಯು ಅವನ ಮಗನಿಗೆ ಗೊತ್ತಾಯಿತು. ಮಗನು ತಂದೆಯ ಈ ಕಳ್ಳತನವನ್ನು ಅಧಿಕಾರಿಗಳಿಗೆ ತಿಳಿಸಿದನು. ಅಧಿಕಾರಿಗಳು ಅವನನ್ನು ಹಿಡಿದು ಶಿಕ್ಷಿಸಿದರು. ಮಗನಿಗೆ ‘ ಭಲೆ ಒಳ್ಳೆಯ ಕೆಲಸಮಾಡಿದೆ ! ’ ಎಂದರು. ಈ ಸಂಗತಿಯು ಕೆಲವು ದಿನಗಳ ಹಿಂದೆ ವರ್ತಮಾನಪತ್ರದಲ್ಲಿ ಪ್ರಕಟವಾಗಿರುವದು.

**ಸಿಂದಿ:—** ಇದು ಸಿಂದಿಯ (ಈಚಲ) ಗಿಡದಿಂದ ತೆಗೆದ ರಸ. ತಾಜಾ ಇದ್ದಾಗ ಇದಕ್ಕೆ ‘ನೀರಾ’ ಎನ್ನುವರು. ನೀರಾ ಕುಡಿದರೆ ಅಮಲೇರುವದಿಲ್ಲ. ಈ ರಸವನ್ನು ಕೆಲವು ಹೊತ್ತಿನವರೆಗೆ ಇಟ್ಟರೆ ಅದು ಹುಳಿಯಾಗುವದು. ಅದೇ ಸಿಂದಿ. ಸಿಂದಿಯನ್ನು ಕುಡಿದರೆ ಅಮಲು ಬರುವದು. ಸಿಂದಿಯು ನಮ್ಮ ಜ್ಞಾನತಂತುಗಳ ಮೇಲೆ ಕೆಟ್ಟ ಪರಿಣಾಮವನ್ನು ಮಾಡುವದರಿಂದ, ನಮ್ಮ ತಿಳಿವಳಿಕೆಯ ಶಕ್ತಿಯು ನಾಶವಾಗುವದು. ಒಳಿತು ಯಾವುದು ಕೆಡಕು ಯಾವುದು ಎಂಬುದು ತಿಳಿಯುವದಿಲ್ಲ. ನಮ್ಮ ಶರೀರದ ಅವಯವಗಳು ಸಹ ಸರಿಯಾಗಿ ಕೆಲಸಮಾಡದಂತಾಗುವವು. ಹೆಚ್ಚು ಸಿಂದಿಯನ್ನು ಕುಡಿದವರು ಎಚ್ಚರು ತಪ್ಪಿ ಕಂಡಕಡೆಯಲ್ಲಿ ಬಿದ್ದುಬಿಡುವರು. ಸಿಂದಿಯು ಶರೀರದ ಮೇಲೆ ಇಷ್ಟು ಕೆಟ್ಟ ಪರಿಣಾಮವನ್ನು ಮಾಡುವದು.

ಕೆಲವರು ಕೆಲಸಮಾಡಿ ದಣಿದಾಗ ದಣಿವು ಆರಿಸಿಕೊಳ್ಳುವದಕ್ಕೆಂದು ಸಿಂದಿಯನ್ನು ಕುಡಿಯುವರು. ಆದರೆ ಸಿಂದಿಯನ್ನು ಕುಡಿಯುವದರಿಂದ ಶರೀ ರದ ದಣಿವು ಹೋಗುವದಿಲ್ಲ; ಇಷ್ಟೇ ಅಲ್ಲ, ದಣಿವು ಇನ್ನೂ ಹೆಚ್ಚುವದು. ಸಿಂದಿಯನ್ನು ಕುಡಿದಾಗ ಬಂದಿದ್ದ ಅಮಲು ಇಳಿದುಹೋದಾಗ, ಮನುಷ್ಯನ

ಶಕ್ತಿಯೂ ಉತ್ಸಾಹವೂ ಕುಂದಿಹೋಗುವದು ಅನುಭವಕ್ಕೆ ಬರುವದು. ಸಿಂದಿಯಲ್ಲಿ ಕೂಡಿರುವ 'ಆಲ್ಕೋಹಾಲ್' ಎಂಬ ಪದಾರ್ಥವು ನರಗಳ ಮೇಲೆ ಕೆಟ್ಟ ಪರಿಣಾಮವನ್ನು ಮಾಡುವದು. ಇದರಿಂದಲೇ ಸಿಂದಿಯನ್ನು ಕುಡಿದಾಗ ಅಮಲು ಬರುವದು. ಹೀಗೆ ಆಲ್ಕೋಹಾಲನ್ನು ಮೇಲಿಂದ ಮೇಲೆ ಸೇವಿಸುವದರಿಂದ, ಶರೀರದೊಳಗಿನ ನರಗಳು ದುರ್ಬಲವಾಗಿ ಬಿಡುವವು; ಶರೀರದಲ್ಲಿ ನಾನಾಬಗೆಯ ರೋಗಗಳೂ ಹುಟ್ಟಿಕೊಳ್ಳುವವು.

**ಸೆರೆ:** — ಇಪ್ಪೇ ಹೂವು, ಕೆಟ್ಟಬೆಲ್ಲ ಮೊದಲಾದ ಪದಾರ್ಥಗಳನ್ನು ಭಟ್ಟಿಗೆ ಹಾಕಿ ಸೆರೆಯನ್ನು ತಯಾರಿಸುವರು. ಸೆರೆಯಲ್ಲಿ ಸಿಂದಿಗಿಂತಲೂ ಹೆಚ್ಚು ಉಗ್ರವಾದ ಸ್ಥಿತಿಯಲ್ಲಿ ಆಲ್ಕೋಹಾಲ್ ಇರುವದು. ಸಿಂದಿಯನ್ನು ಬಾಟಲಿ ತುಂಬ ಕುಡಿದರೆ ಅಮಲಾಗುತ್ತಿದ್ದರೆ, ಸೆರೆಯನ್ನು ಒಂದು ಗ್ಲಾಸಿನಷ್ಟು ಕುಡಿದರೂ ಅಷ್ಟೇ ಅಮಲಾಗುವದು. ಆದ್ದರಿಂದ ಸಿಂದಿಗಿಂತ ಸೆರೆಯು ಹೆಚ್ಚು ಮಾದಕವಾಗಿರುವದು. ಸಿಂದಿಯನ್ನು ಕುಡಿಯುವದರಿಂದ ಆಗುವ ಹಾನಿಗಿಂತಲೂ ಸೆರೆಯನ್ನು ಕುಡಿಯುವದರಿಂದ ಆಗುವ ಹಾನಿಯು ಹೆಚ್ಚು. ಯಾಕೆಂದರೆ ಸೆರೆಯು ಸಿಂದಿಗಿಂತ ಉಗ್ರವಾಗಿರುವದು. ಅದರಲ್ಲಿ ಆಲ್ಕೋಹಾಲವು ಹೆಚ್ಚು ಪ್ರಮಾಣದಿಂದ ಇರುವದು.

ಸೆರೆ—ಸಿಂದಿಗಳನ್ನು ಹೊಸದಾಗಿ ಕುಡಿಯುವವರು, ಮೊದಲು ಕುಡುಕರ ಸಂಗತಿಗೆ ಬಿದ್ದು ತುಸು ತುಸು ಕುಡಿಯಹತ್ತುವರು. ಒಮ್ಮೆ ಈ ವ್ಯಸನವು ಅಂಟಿಕೊಂಡಿತೆಂದರೆ ಅದು ಬಿಡುವದೇ ಇಲ್ಲ. ದಿನದಿನಕ್ಕೆ ಅದು ಬಲಿಯುತ್ತ ಹೋಗುವದು. ಕುಡಿಯುವ ಚಟಕ್ಕೆ ಬಿದ್ದವರು ದುಡಿಯುವ ಶಕ್ತಿಯನ್ನು ಕಳೆದುಕೊಳ್ಳುವರು. ಕುಡಿಯುವದಕ್ಕೆ ದುಡ್ಡು ಎಷ್ಟು ಸಿಕ್ಕರೂ ಸಾಲುವದಿಲ್ಲ. ಆಗ ಅವರು ದುಡ್ಡುಗಳಿಸುವದಕ್ಕೆ ಸುಳ್ಳು, ಕಳವು, ಕೊಲೆ ಮುಂತಾದ ದುಷ್ಟ ಉಪಾಯಗಳನ್ನು ಕಲಿತು ಅಡ್ಡದಾರಿಗೆ ಬೀಳುವರು. ಇಂಥವರಿಗೆ ತಮ್ಮ ಹೆಂಡಿರು-ಮಕ್ಕಳು ಉಪವಾಸಬೀಳುವರೆಂಬ ಚಿಂತೆಯೂ ಇರುವದಿಲ್ಲ; ತಮಗೆ ನಾಳೆಗೆ ಊಟಕ್ಕೆ ಕಾಳಿಲ್ಲ—ಎಂಬ ವಿಚಾರವೂ ಬರುವದಿಲ್ಲ. ಕುಡಿಯುವ ಚಟಕ್ಕೆ ಬಿದ್ದವರು ಸರ್ವರೀತಿಯಿಂದಲೂ ಹಾಳಾಗಿ ಹೋಗುವರು. ಇಂಥವರಿಗೆ ಮನೆಯಲ್ಲಿ ಸುಖವಿಲ್ಲ; ಸಮಾಜದಲ್ಲಿ ಮಾನ-ಮರ್ಯಾದೆಗಳಿಲ್ಲ. ಹೀಗಾಗಿ ಜೀವನವೇ ಅಸಹ್ಯವಾಗಿ ಹೋಗುವದು.

ಸೆರೆ—ಸಿಂದಿ ಕುಡಿಯುವವರ ಗೆಳೆತನವನ್ನು ಎಂದೂ ಮಾಡಬಾರದು. ಅಂಥವರನ್ನು ಹತ್ತಿರ ಸಹ ಹಾಯಗೊಡಬಾರದು. ಯಾಕೆಂದರೆ ಅವರು ತಮ್ಮ ಹತ್ತಿರ ಬರುವವರನ್ನು ಇಂದಿಲ್ಲ ನಾಳೆ ತಮ್ಮ ಚಟಕ್ಕೆ ಎಳೆದುಕೊಳ್ಳುವರು.

### ಅಭ್ಯಸನಗಳು

೧. ನೀರಾ ಕುಡಿದರೆ ಅಮಲಾಗುವದಿಲ್ಲ; ಸಿಂದಿಯನ್ನು ಕುಡಿದರೆ ಅಮಲಾಗುವದು ಯಾಕೆ ?

೨. ಸಿಂದಿಗಿಂತಲೂ ಸೆರೆ ಕುಡಿಯುವದರಿಂದ ಹೆಚ್ಚು ಹಾನಿಯಾಗುವದು ಯಾಕೆ ?

೩. ಸಿಂದಿ-ಸೆರೆಗಳನ್ನು ಕುಡಿಯುವವರಿಗೆ ಜೀವನವೇ ಅಸಹ್ಯವಾಗುವದು ಯಾಕೆ?

೪. ಯಾರಾದರೂ ಸಿಂದಿ-ಸೆರೆಗಳನ್ನು ಕುಡಿಯುವದು ನಿಮಗೆ ಗೊತ್ತಾದರೆ ನೀವು ಏನು ಮಾಡುವಿರಿ ?

# ರೋಗಗಳೂ ಅವುಗಳ ಪ್ರತಿಬಂಧಕ ಉಪಾಯಗಳೂ

## ೧. ರೋಗಗಳು ಹುಟ್ಟುವ ಬಗೆ

ಮನುಷ್ಯನ ಶರೀರವು ಯಾವಾಗಲೂ ನಿರೋಗಿಯಾಗಿರುವುದಿಲ್ಲ. ಅವನು ತನ್ನ ಆಲಸ್ಯ ಅಥವಾ ಅಜ್ಞಾನದಿಂದ ಆರೋಗ್ಯದ ನಿಯಮಗಳನ್ನು ಪಾಲಿಸದಿರುವದೇ ಇದಕ್ಕೆ ಕಾರಣವಾಗಿದೆ. ಮನುಷ್ಯನಿಗೆ ಸಣ್ಣಪುಟ್ಟ ಬೇನೆಗಳು ಬಂದರೆ, ಅವು ಸರ್ವಸಾಧಾರಣ ಉಪಾಯಗಳಿಂದ ಗುಣವಾಗುವವು. ಆದರೆ ದೊಡ್ಡ ಬೇನೆಗಳು ಬಂದರೆ ಅವು ಸಾಧಾರಣ ಉಪಾಯಗಳಿಂದ ಗುಣವಾಗಲಾರವು. ಇವುಗಳಿಂದ ಒಮ್ಮೊಮ್ಮೆ ಅವನು ಪ್ರಾಣಕ್ಕೆ ಸಹ ಎರವಾಗುತ್ತಾನೆ; ಅಲ್ಲದೆ ಈ ರೋಗಗಳು ಒಬ್ಬರಿಂದೊಬ್ಬರಿಗೆ ಸೇರುತ್ತ ಎಲ್ಲ ಕಡೆಗೂ ಹಬ್ಬುತ್ತವೆ. ಆದ್ದರಿಂದ ಇವುಗಳಿಂದ ದೂರವಿರುವದು ಮನುಷ್ಯನ ಮೊದಲ ಕರ್ತವ್ಯವಾಗಿದೆ.

**ರೋಗಗಳು ಹುಟ್ಟುವ ಬಗೆ:—** ರೋಗಗಳು ಸಾಧಾರಣವಾಗಿ ಸೂಕ್ಷ್ಮವಾದ ಜಂತುಗಳಿಂದ ಹುಟ್ಟುತ್ತವೆ. ಇವುಗಳಿಂದ ವೈಲಿಯ ಬೇನೆ, ಮಾರಿಯ ಬೇನೆ, ಪ್ಲೇಗು, ಕ್ಷಯ, ಚಳಿಜ್ವರ, ನಾರುಹುಣ್ಣು, ವಿಷಮಜ್ವರ ಇಂತಹ ಅನೇಕ ರೋಗಗಳು ಬರುತ್ತವೆ. ರೋಗಜಂತುಗಳು ಬೇರೆ ಬೇರೆ ಪ್ರಕಾರದವಿರುವವು. ಅವುಗಳನ್ನು ಸೂಕ್ಷ್ಮದರ್ಶಕಯಂತ್ರದಿಂದ ಮಾತ್ರ ನೋಡಬಹುದು. ಒಂದು ಸೂಜಿಯ ಮೊನೆಯಷ್ಟು ಸ್ಥಳದಲ್ಲಿ ನೂರಾರು ಜಂತುಗಳು ಇರುತ್ತವೆ.

ರೋಗಜಂತುಗಳು, ರೋಗಪೀಡಿತ ಮನುಷ್ಯ ಮತ್ತು ಇತರ ಪ್ರಾಣಿಗಳಿಂದಲೇ ಮುಖ್ಯವಾಗಿ ಹುಟ್ಟುತ್ತವೆ. ಇವು ಕೊಳೆತ ಪದಾರ್ಥ, ಪ್ರಾಣಿಗಳ ಮಲ-ಮೂತ್ರ, ಕೊಳಚಿ ನೀರು, ಹಳಸಿದ ಅನ್ನ, ಧೂಳಿ ಮುಂತಾದವುಗಳಲ್ಲಿ ಸೇರಿಕೊಂಡಾಗ ಇವುಗಳ ಸಂತತಿಯು ಅಲ್ಪಾವಕಾಶದಲ್ಲಿಯೇ



ಆಕೃತಿ ೧೧.

ಬೆಳೆದು ಅಸಂಖ್ಯವಾಗುವದು. ಅವು ಮನುಷ್ಯನ ಶರೀರದಲ್ಲಿ ಸೇರಿಕೊಳ್ಳುವ ರೀತಿಗಳು:— (ಅ) ರೋಗಿಯ ಸಂಪರ್ಕದಿಂದ (ಆ) ಶ್ವಾಸದೊಡನೆ (ಇ) ಸೇವಿಸುವ ಆಹಾರ-ನೀರುಗಳ ಸಂಗಡ (ಈ) ಗಾಯಗಳ ಮುಖಾಂತರ (ಉ) ನೊಣ, ಚಿಕ್ಕಾಡು, ಗುಂಗಾಡು ಮೊದಲಾದ ಮಧ್ಯಸ್ಥಗಾರರಿಂದ [(ಊ)] ಶರೀರದೊಳಗಿನ ರಕ್ತದಲ್ಲಿರುವ ಆರ್ದ್ರತೆ ಹಾಗು ಉಷ್ಣತೆ- ಇವುಗಳ ಮೂಲಕ.

(ಅ) ರೋಗಿಯ ಸಂಪರ್ಕಮಾಡುವದರಿಂದ, ಅವನ ವೈಕೈಗಳಿಗೆ ಅಂಟಿಕೊಂಡಿರುವ ರೋಗಜಂತುಗಳು, ನಿರೋಗಿ ಮನುಷ್ಯನು ಸೇವಿಸುವ ಆಹಾರ-ನೀರುಗಳೊಡನೆ ಶರೀರದಲ್ಲಿ ಸೇರುವವು.

(ಆ) ರೋಗಿಯ ಕೆಮ್ಮು, ದಮ್ಮು, ವಾಂತಿ—ಇವುಗಳಿಂದ ಹೊರಬಿದ್ದ ಕಫ-ಹೊಲಸುಗಳಲ್ಲಿರುವ ಜಂತುಗಳು ಸುತ್ತಲಿನ ಹವೆಯಲ್ಲಿ ಕೂಡಿಕೊಂಡು ನಿರೋಗಿ ಮನುಷ್ಯನ ಶ್ವಾಸದ ಕೂಡ ಒಳಸೇರುವವು.

(ಇ) ಕೊಳೆತ ಹಣ್ಣು, ಹಳಸಿದ ಅನ್ನ, ಕೆಟ್ಟ ನೀರು—ಇವುಗಳನ್ನು ಸೇವಿಸುವದರಿಂದ, ಇವುಗಳಲ್ಲಿರುವ ಜಂತುಗಳು ಶರೀರದಲ್ಲಿ ಸೇರುವವು.

(ಈ) ಧೂಳಿಯ ಕಣಗಳ ಮುಖಾಂತರವಾಗಿ ರೋಗಜಂತುಗಳು ಮನುಷ್ಯನ ಗಾಯಗಳಲ್ಲಿ ಸೇರಿಕೊಂಡು ರೋಗವನ್ನು ಹಬ್ಬಿಸುತ್ತವೆ.

(ಉ) ನೊಣ, ಗುಂಗಾಡು, ಚಿಕ್ಕಾಡು ಮುಂತಾದವುಗಳು ರೋಗಿ-ಮನುಷ್ಯನನ್ನು ಕಚ್ಚಿ, ಅನಂತರ ನಿರೋಗಿ ಮನುಷ್ಯನನ್ನು ಕಚ್ಚುವದರಿಂದ, ಅವುಗಳ ಕೋಶಗಳ ಮುಖಾಂತರ ಬಂದ ಜಂತುಗಳು ನಿರೋಗಿ ಮನುಷ್ಯನ ಶರೀರವನ್ನು ಸೇರುವವು.

ಮೇಲೆ ಹೇಳಿದ ಯಾವದೇ ಮಾರ್ಗದಿಂದ ರೋಗಜಂತುಗಳು ಮನುಷ್ಯನ ದೇಹದಲ್ಲಿ ಸೇರಿಕೊಳ್ಳಬಹುದು. ಅವನು ಸಶಕ್ತನಾಗಿದ್ದರೆ

ಸ್ವಾಭಾವಿಕವಾಗಿ ಅವನ ರಕ್ತದಲ್ಲಿರುವ ಬಿಳಿಯ ಗೋಲಕಗಳು ಈ ರೋಗ ಬೀಜಗಳನ್ನು ಬೆಳೆಯಗೊಡದೆ ನಾಶಮಾಡಿಬಿಡುವವು; ಆದ್ದರಿಂದ ಅವನಿಗೆ ಬೇನೆಯು ಬರಲಾರದು. ಆದರೆ ಅಶಕ್ತಮನುಷ್ಯನಲ್ಲಿ ಜಂತುಗಳು ಸೇರಿದರೆ, ಅವನಲ್ಲಿರುವ ಬಿಳಿಯ ಗೋಲಕಗಳು ದುರ್ಬಲವಿರುವದರಿಂದ, ಈ ಜಂತುಗಳು ನಾಶವಾಗದೆ ತೀವ್ರವಾಗಿ ಬೆಳೆಯುವವು. ಅವುಗಳಿಂದುಂಟಾಗುವ ಒಂದು ತರದ ವಿಷಪದಾರ್ಥದಿಂದ ಮನುಷ್ಯನಿಗೆ ಬೇನೆ ಬರುತ್ತದೆ. ಆದ್ದರಿಂದ ನಾವು ಸಶಕ್ತರೂ ನಿರೋಗಿಗಳೂ ಆಗಬೇಕು. ನಿರೋಗಿಯಾಗಿರುವದಕ್ಕಾಗಿ ಪ್ರತಿಯೊಬ್ಬನೂ ಈ ಕೆಳಗಿನ ನಿಯಮುಗಳನ್ನು ಪಾಲಿಸುವದು ಒಳಿತು :

(೧) ನಮ್ಮ ಶರೀರ ಹಾಗು ಬಟ್ಟೆಗಳನ್ನು ಸ್ವಚ್ಛವಾಗಿಟ್ಟು ಕೊಳ್ಳಬೇಕು.

(೨) ನಮ್ಮ ವಾಸಸ್ಥಳ ಹಾಗು ಸುತ್ತುಮುತ್ತಲಿನ ಸ್ಥಳಗಳು ನಿರ್ಮಲವಾಗಿರಬೇಕು.

(೩) ಪೌಷ್ಟಿಕ ಆಹಾರವನ್ನು ವೇಳೆಗೆ ಸರಿಯಾಗಿ ಮಿತಿಯಿಂದ ಸೇವಿಸುತ್ತಿರಬೇಕು; ಮತ್ತು ಶುದ್ಧವಾದ ನೀರನ್ನು ಕುಡಿಯಬೇಕು.

(೪) ದಿನಾಲು ನಮಗೆ ಒಗ್ಗುವಷ್ಟು ವ್ಯಾಯಾಮವನ್ನು ಮಾಡು-ತ್ತಿರಬೇಕು.

(೫) ಸ್ವಚ್ಛ ಹವೆಯಲ್ಲಿ ಅಡ್ಡಾಡುತ್ತಿರಬೇಕು.

(೬) ನಿದ್ದೆಗೆಡಬಾರದು.

(೭) ವಿಶೇಷ ಮಾನಸಿಕ ಶ್ರಮವಾಗದಂತಿರಬೇಕು. ಹಾಗು ದೇಹವನ್ನು ದುರ್ಬಲಗೊಳಿಸುವ ಚಟಗಳಿಂದ ದೂರ-ವಾಗಿರಬೇಕು.

ಮೇಲ್ಕಂಡ ಆರೋಗ್ಯದ ನಿಯಮುಗಳಂತೆ ನಡೆದರೂ, ನಿರೋಗಿ ಮನುಷ್ಯನಿಗೆ ಒಮ್ಮೊಮ್ಮೆ ಈ ರೋಗಗಳು ಬರುವದುಂಟು. ಆದ್ದರಿಂದ ಈ ರೋಗಗಳ ಲಕ್ಷಣ ಹಾಗು ಇವುಗಳ ನಿವಾರಣೋಪಾಯಗಳನ್ನು ಕುರಿತು ಮುಂದಿನ ಪಾಠಗಳಲ್ಲಿ ಕಲಿಯುವಾ.

## ಅಭ್ಯಸನಗಳು

೧. ಮನುಷ್ಯನಿಗೆ ಬೇನೆಯು ಬಾರದಂತೆ ಅವನು ಪಾಲಿಸಬೇಕಾದ ಆರೋಗ್ಯದ ನಿಯಮುಗಳಾವವು ?

೨. ಬೇನೆಯನ್ನು ಹಬ್ಬಿಸುವ ಮಧ್ಯಸ್ಥಗಾರರು ಯಾರು ?

೩. ನಮ್ಮ ಶರೀರದಲ್ಲಿ, ಒಳಸೇರಿದ ರೋಗಜಂತುಗಳನ್ನು ನಾಶಪಡಿಸಲು ಯಾವ ತರದ ವ್ಯವಸ್ಥೆಯಿದೆ ?

## ೨. ಮೈಲಿಯ ಬೇನೆ

ಮೈಲಿಯ ಬೇನೆಯನ್ನು 'ಸಿಡುಬು' ಎಂದೂ ಕರೆಯುವರು. ಇದು ಮನುಷ್ಯನಿಗೆ ಬರುವ ಸಾಂಸರ್ಗಿಕರೋಗಗಳಲ್ಲಿ ಒಂದಾಗಿದೆ. ಮೈಲಿಯನ್ನು ತೆಗೆಯಿಸಿಕೊಳ್ಳದಿದ್ದವರಿಗೆ ಈ ಬೇನೆಯು ಬರುವದು ಹೆಚ್ಚು. ಅವರಲ್ಲಿ ಕೆಲವರು ಸಾಯುವದೂ ಉಂಟು. ಉಳಿದವರ ಮುಖ ಹಾಗೂ ಶರೀರವೆಲ್ಲ ಮೈಲಿಯ ಕಲೆಗಳುಳ್ಳದ್ದಾಗಿ, ಅವರು ಕುರೂಪಿಗಳಾಗುತ್ತಾರೆ. ಕೆಲಕೆಲವರ ಕಣ್ಣುಗಳು ಹೋಗುವವು.



ಆಕೃತಿ ೧೨. ಸಿಡುಬು ತಗಲಿದ ಮಗು

**ಬೇನೆಯ ಲಕ್ಷಣಗಳು:—** ಆರಂಭದಲ್ಲಿ ಚಳಿ ಹತ್ತುವದು. ತಲೆ–ಬೆನ್ನುಗಳು ನೋಯಹತ್ತುವವು. ಆ ಮೇಲೆ ೧೦೩ ಅಂಶ ಅಥವಾ ೧೦೪ ಅಂಶ-



ಆಕೃತಿ ೧೩. ಮೈಲಿ ತೆಗೆಯುವದು

ಗಳವರೆಗೆ ಜ್ವರ ಬರುವದು. ಮುಂದೆ ೨–೩ ದಿನಗಳಲ್ಲಿ ಜ್ವರವು ಇಳಿದು

ಕಣ್ಣು, ಕಿವಿ, ನಾಲಗೆ, ಮೈ, ಕೈಕಾಲು, ಮೊದಲು ಮಾಡಿಕೊಂಡು ಶರೀರದ ಎಲ್ಲ ಭಾಗಗಳಲ್ಲಿಯೂ ಕೀವಿನಿಂದ ತುಂಬಿದ ಗುಳ್ಳೆಗಳೇಳುವವು.

**ರೋಗಪ್ರತಿಬಂಧಕ ಉಪಾಯ:—** ಕೂಸು ಹುಟ್ಟಿದ ೬–೭ ತಿಂಗಳೊಳಗಾಗಿ ಮೈಲಿತೆಗೆಯಿಸಬೇಕು. ಮುಂದೆ ಪ್ರತಿ ೫ ವರುಷಕ್ಕೊಮ್ಮೆ ತೆಗೆಯಿಸುತ್ತಿರಬೇಕು, ಪ್ರತಿ ೩ ವರುಷಕ್ಕೊಮ್ಮೆ ತೆಗೆಯಿಸುವದು ಹೆಚ್ಚು ಒಳಿತು, ಎಂದರೆ ಈ ಬೇನೆಯು ಬರುವ ಸಂಭವ ಕಡಮೆ. ಒಮ್ಮೆ ಮೈಲಿ ಎದ್ದ ಮನುಷ್ಯನಿಗೆ ಪುನಃ ಈ ಬೇನೆ ಬರುವದು ಅತಿ ವಿರಳ.

### ಅಭ್ಯಾಸಗಳು

೧. ಕೂಸುಗಳಿಗೆ ಮೈಲಿಯನ್ನು ಚುಚ್ಚಿಸುವ ಕಾರಣವೇನು ?
೨. ಮೈಲಿಯ ಬೇನೆಯ ಲಕ್ಷಣಗಳನ್ನು ಹೇಳಿರಿ.
೩. ಮೈಲಿಯ ಬೇನೆಯಿಂದ ಮನುಷ್ಯರು ಕುರೂಪಿಗಳಾಗುತ್ತಾರೆ ಎಂಬುದನ್ನು ಸಿದ್ಧಮಾಡಿರಿ.
೪. ಬಿಟ್ಟ ಶಬ್ದಗಳನ್ನು ತುಂಬಿರಿ.
(ಅ) ............ಎದ್ದ ಮನುಷ್ಯನಿಗೆ............ಈ ಬೇನೆಯು ಬರುವದಿಲ್ಲ.
(ಬ) ಕೂಸುಹುಟ್ಟಿದ............ ತಿಂಗಳೊಳಗಾಗಿ............ ಮುಂದೆ........ ತೆಗೆಯಿಸಬೇಕು.

## ೩. ಮಾರಿಕಾ (ಕಾಲರಾ) ಬೇನೆ

ಈ ಬೇನೆಯು ' ಕೊಮಾ ಬೆಸಿಲಸ್ ಅಥವಾ ಕಾಲರಾ ವ್ಹಿಬ್ರಾಯೊ ' ಎಂಬ ರೋಗಜಂತುಗಳಿಂದ ಹುಟ್ಟುವದು. ಇವು ನೀರು ಹಾಗು ಹಾಲುಗಳಲ್ಲಿ ಬಹು ತೀವ್ರವಾಗಿ ಬೆಳೆವಣಿಗೆ ಹೊಂದುವವು. ಈ ರೋಗವು, ಜನದಟ್ಟಣೆ ಹೆಚ್ಚಾಗುವ ಸಂದರ್ಭಗಳಲ್ಲಿ ಎಂದರೆ ಜಾತ್ರೆ, ಉರುಸು, ಪರಿಸೆ ಮುಂತಾದವು ನೆರೆಯುವ ಕಾಲದಲ್ಲಿ ಬಹು ಬೇಗ ಪ್ರಸಾರವಾಗುವದು.

**ಲಕ್ಷಣಗಳು:—** (೧) ಭೇದಿಯಾಗುವದು.
(೨) ಭೇದಿಯು ಹೆಚ್ಚಾಗುತ್ತ, ಬರುಬರುತ್ತ ಮಲವು ಅಕ್ಕಿಯ ಗಂಜಿಯಂತೆ ತೆಳ್ಳಗಾಗುವದು.
(೩) ಮೂತ್ರ ಕಟ್ಟಾಗುವದು.
(೪) ಹೆಚ್ಚಾಗಿ ವಾಂತಿಯಾಗುವದು.
(೫) ಶರೀರದ ಉಷ್ಣತಾಮಾನವು ಕಡಮೆಯಾಗುತ್ತ ಹೋಗುವದು.

(೬) ಕೈಕಾಲುಗಳ ನರಗಳು ಸೆಳೆದುಕೊಳ್ಳಹತ್ತುವವು, (ಒರಟು ಬರ ಹತ್ತುವದು.)

(೭) ನೀರಡಿಕೆ ಹೆಚ್ಚಾಗುವದು.

**ಪ್ರಸಾರ:**— 'ಕೊಮಾ ಬೆಸಿಲಸ್' ಈ ರೋಗಜಂತುಗಳುಳ್ಳ ನೀರನ್ನು ಕುಡಿಯುವದರಿಂದಾಗಲಿ, ಆ ನೀರಿನಿಂದ ತೊಳೆದ ಹಸಿಯತೊಪ್ಪಲು-ಪಲ್ಲೆ ತಿನ್ನುವದರಿಂದಾಗಲಿ ಇಲ್ಲವೆ ಆ ನೀರಿನಿಂದ ಕೂಡಿದ ಹಾಲನ್ನು ಸೇವಿಸುವದ-ರಿಂದಾಗಲಿ, ಈ ರೋಗಜಂತುಗಳು ಶರೀರವನ್ನು ಪ್ರವೇಶಿಸುವವು.

ಈ ರೋಗದಿಂದ ಬಳಲುವ ರೋಗಿಯ ಮಲ-ವಾಂತಿಗಳಲ್ಲಿ ರೋಗ-ಜಂತುಗಳಿರುತ್ತವೆ. ಉಪಚಾರಕರು ರೋಗಿಯನ್ನು ಉಪಚರಿಸುವಾಗ, ಈ ರೋಗಜಂತುಗಳು ಅವರ ಕೈಗಳಿಗೆ ಅಂಟುವದುಂಟು. ಅವರು ತಮ್ಮ ಕೈಗಳನ್ನು ಸ್ವಚ್ಛವಾಗಿ ತೊಳೆದುಕೊಳ್ಳದೆ ಹಾಗೆಯೆ ಆಹಾರಪದಾರ್ಥಗಳನ್ನೂ ನೀರು ಮುಂತಾದವುಗಳನ್ನೂ ಮುಟ್ಟಿದರೆ, ಅವುಗಳಲ್ಲಿ ರೋಗಜಂತುಗಳು ಸೇರುವವು. ಇದಲ್ಲದೆ ರೋಗಿಯ ಮಲ-ವಾಂತಿಗಳ ಮೇಲೆ ಕುಳಿತ ನೊಣಗಳ ಮೈಗೆ ರೋಗ ಜಂತುಗಳು ಅಂಟಿಕೊಳ್ಳುವವು. ಇಂಥ ನೊಣಗಳು ಹಾರಾಡುತ್ತ ಹೋಗಿ ತೆರೆದಿಟ್ಟ ಆಹಾರಪದಾರ್ಥಗಳ ಮೇಲೆ ಕುಳಿತುಕೊಳ್ಳಲು, ಅವುಗಳ ಮೈಗೆ ಅಂಟಿಕೊಂಡಿದ್ದ ರೋಗಜಂತುಗಳು ಆ ಆಹಾರಪದಾರ್ಥಗಳಲ್ಲಿ ಸೇರುವವು. ಹೀಗೆ ದೋಷಯುಕ್ತವಾದ ಆಹಾರಪದಾರ್ಥಗಳನ್ನು ಸೇವಿಸುವ ನಿರೋಗಿಗಳಿಗೂ ಈ ರೋಗವು ಅಂಟಿಕೊಳ್ಳುವದು.

**ಪ್ರತಿಬಂಧಕ ಉಪಾಯುಗಳು:**— (೧) ಊರಲ್ಲಿ ಮಾರಿಕಾಬೇನೆಯು ಪ್ರಾರಂಭವಾಗುವ ಲಕ್ಷಣಗಳು ಕಂಡುಬಂದರೆ, ಎಲ್ಲರೂ ಕುಡಿಯುವ ನೀರನ್ನು ಮೊದಲು ಕುದಿಸಿ ಸೋಸಿಇಟ್ಟು ಕುಡಿಯಬೇಕು. ಕುಡಿಯುವ ನೀರಿನ ಬಾವಿಗಳಲ್ಲಿ 'ಬ್ಲೀಚಿಂಗ್ ಪಾವಡರ್' ಎಂಬ ಕ್ರಿಮಿನಾಶಕ ಪುಡಿಯನ್ನು ಹಾಕಬೇಕು.

(೨) ಹಸಿಯ (ಕುದಿಸದೇ ಇದ್ದ) ತೊಪ್ಪಲುಪಲ್ಲೆಗಳನ್ನು ತಿನ್ನ ಬಾರದು. ಹಾಲು ಮರಳಿಸಿ (ಕುದಿಸಿ) ಉಪಯೋಗಿಸಬೇಕು.

(೩) ಬಿಸಿ ಬಿಸಿ ಆಹಾರಪದಾರ್ಥಗಳನ್ನೇ ಸೇವಿಸಬೇಕು.

(೪) ಆಹಾರಪದಾರ್ಥಗಳು, ಕುಡಿಯುವ ನೀರು—ಇವುಗಳ ಮೇಲೆ ನೊಣಗಳು ಕುಳಿತುಕೊಳ್ಳದಂತೆ ಅವುಗಳನ್ನು ಮುಚ್ಚಿಡಬೇಕು.

(ಇ) ಮಾರಿಕಾಬೇನೆಯನ್ನು ಪ್ರತಿಬಂಧಿಸುವ ಚುಚ್ಚುಮದ್ದನ್ನು ಚುಚ್ಚಿಸಿಕೊಳ್ಳಬೇಕು.

ಒಟ್ಟಿಗೆ ಈ ಬೇನೆಯು ಭಯಂಕರವಾದುದು. ಇದು ಮನುಷ್ಯನನ್ನು ತೀವ್ರ ದುರ್ಬಲನನ್ನಾಗಿ ಮಾಡಿ ಮರಣಕ್ಕೆ ಗುರಿಮಾಡುತ್ತದೆ. ಆದ್ದರಿಂದ, ಈ ಬೇನೆಯ ಲಕ್ಷಣ ತೋರಿದಾಗ, ಎಲ್ಲ ಬಗೆಯಿಂದಲೂ ಜಾಗರೂಕರಾಗಿರುವದು ಹೆಚ್ಚು ಒಳ್ಳೆಯದು.

## ಅಭ್ಯಸನಗಳು

೧. ಕಾಲರಾಬೇನೆಯು ಯಾವ ಕ್ರಿಮಿಗಳಿಂದ ಉಂಟಾಗುವದು ?

೨. ಈ ಬೇನೆಯ ಲಕ್ಷಣಗಳೇನು ?

೩. ಕಾಲರಾ ಪ್ರತಿಬಂಧಕ ಉಪಾಯಗಳು ಯಾವವು ?

೪. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ :

(ಅ) …………ಪದಾರ್ಥಗಳು…………ನೀರು ಇವುಗಳ ಮೇಲೆ………… ಕುಳಿತುಕೊಳ್ಳದಂತೆ ಅವುಗಳನ್ನು ಮುಚ್ಚಿಡಬೇಕು.

(ಬ) ಕುಡಿಯುವ———ಗಳಲ್ಲಿ———ಎಂಬ———ಪುಡಿಯನ್ನು ಹಾಕಬೇಕು.

## ೪. ಪ್ಲೇಗು

ಪ್ಲೇಗುಬೇನೆಯೂ ಮಾರಿಕಾದಂತೆ ಭಯಂಕರವಾದುದು. ಈ ಬೇನೆಯು ಪೆಸ್ಟಿಸ್ ಎಂಬ ರೋಗಜಂತುಗಳಿಂದ ಹುಟ್ಟುವದು. ಈ ಬೇನೆಯು ಭಾರತಕ್ಕೆ ಇತ್ತೀಚೆಗೆ ಬಂದುದಾಗಿದೆ. ಹಿಂದೆ ಒಮ್ಮೆ ಲಂಡನ್ ಪಟ್ಟಣದಲ್ಲಿ ಇದು ತುಂಬ ಪಸರಿಸಿತ್ತು. ಅಲ್ಲಿಂದ ನಮ್ಮ ದೇಶಕ್ಕೆ ಬಂದ ಜನರಿಂದ ಈ ರೋಗವು ಇಲ್ಲಿಗೆ ಬಂದಿತೆಂದು ಹೇಳುತ್ತಾರೆ. ಈ ಬೇನೆಯು ಒಬ್ಬರಿಂದೊಬ್ಬರಿಗೆ ಬಹು ಬೇಗ ಅಂಟಿಕೊಳ್ಳುವದು.

**ಲಕ್ಷಣಗಳು:**— (೧) ಹೆಚ್ಚು ಜ್ವರ ಬರುವದು.

(೨) ಬಗಲಲ್ಲಿ ಇಲ್ಲವೆ ಗೆಜ್ಜೆಗಳಲ್ಲಿ ಗಂಟುಗಳು ಕಾಣಿಸಿಕೊಳ್ಳುವವು.

**ಪ್ರಸಾರ:**— ಈ ರೋಗವು ಮೊದಲು ಇಲಿಗಳಿಗೆ ಬರುವದು. ಆಗ ಇಲಿಗಳು ಸಾಯತೊಡಗುವವು. ಇಲಿಯ ರಕ್ತವನ್ನು ಹೀರುವದಕ್ಕಾಗಿ ಅದರ ಮೈ ಮೇಲೆ ಕುಳಿತಿರುವ ಚಿಕ್ಕಾಡುಗಳು, ಇಲಿಯು ಸತ್ತ ಕೂಡಲೆ ಅದನ್ನು ಬಿಟ್ಟು ಬೇರೆ ಕಡೆಗೆ ಹೊರಡುವವು. ಇವುಗಳ ಶರೀರದಲ್ಲಿ ಇಲಿಗಳ ರಕ್ತದಲ್ಲಿದ್ದ ರೋಗಜಂತುಗಳು ಸೇರಿಕೊಂಡಿರುವವು. ಹೀಗೆ

ಹೊಟ್ಟೆಯೊಳಗೆ ರೋಗಜಂತುಗಳುಳ್ಳ ಚಿಕ್ಕಾಡುಗಳು, ನಿರೋಗಿಯಾದ ಬೇರೆ ಇಲಿಯನ್ನಾಗಲಿ ಮನುಷ್ಯನನ್ನಾಗಲಿ ಕಚ್ಚಿದುವೆಂದರೆ, ಆ ಇಲಿಯ ಇಲ್ಲವೆ ಮನುಷ್ಯನ ಶರೀರದಲ್ಲಿ ರೋಗಜಂತುಗಳು ಸೇರುವವು. ಈ ಪ್ರಕಾರ ಈ ರೋಗವು ಇಲಿಗಳಿಂದ ಚಿಕ್ಕಾಡುಗಳ ಮುಖಾಂತರ ಮನುಷ್ಯರಿಗೆ ಬರುವದು. ಮನೆಯಲ್ಲಿ ಇಲಿಗಳೂ ಚಿಕ್ಕಾಡುಗಳೂ ಹೆಚ್ಚಾಗಿದ್ದಂತೆ ರೋಗದ ಪ್ರಸಾರವೂ ಹೆಚ್ಚಾಗುವದು. ಜನರು ಪ್ರವಾಸಮಾಡುವಾಗ ತಮ್ಮೊಡನೆ ತೆಗೆದುಕೊಂಡು ಹೋಗುವ ಸಾಮಾನುಗಳ ಸಂಗಡ ಇಲಿಗಳೂ ಚಿಕ್ಕಾಡುಗಳೂ ಊರಿಂದೂರಿಗೆ ಹೋಗಿ, ಅಲ್ಲಿಯೂ ಈ ರೋಗವನ್ನು ಪ್ರಸಾರ ಮಾಡುವವು.

DHARWAR




ಆಕೃತಿ ೧೪. ಪ್ಲೇಗುಬೇನೆಯ ಹಬ್ಬುಗೆ

**ಆರಯಿಕೆ:—** (೧) ರೋಗಿಯನ್ನು ಶುದ್ಧವಾದ ಹಾಗು ಸಾಕಷ್ಟು ಹವೆಯಾಡುವ ಕೋಣೆಯಲ್ಲಿ ಪ್ರತ್ಯೇಕಿಸಿ ಇಡಬೇಕು.

ತಜ್ಞರಾದ ಡಾಕ್ಟರರಿಂದ ಔಷಧೋಪಚಾರವನ್ನು ಮಾಡಿಸಬೇಕು.

**ಪ್ರತಿಬಂಧಕ ಉಪಾಯ:—** (೧) ಈ ರೋಗಕ್ಕೆ ಮೂಲಕಾರಣವಾದ ಇಲಿಗಳನ್ನು ನಾಶಪಡಿಸಬೇಕು. ಮನೆಯಲ್ಲಿ ಇಲಿಗಳಾಗದಂತೆ ಎಚ್ಚರವನ್ನು ವಹಿಸಬೇಕು.

(೨) ಮನೆಯಲ್ಲಿ ಇಲಿಗಳು ಬೀಳಹತ್ತಿದರೆ (ಸಾಯಹತ್ತಿದರೆ) ಅದು ಪ್ಲೇಗಿನ ಲಕ್ಷಣವೆಂದು ತಿಳಿದು, ಸತ್ತ ಇಲಿಗಳ ಮೇಲೆ ಚಿಮಣಿಎಣ್ಣೆಯನ್ನು ಹಾಕಿ, ಅವುಗಳನ್ನು ಮನೆಯಿಂದ ದೂರದಲ್ಲಿ ಸುಡಬೇಕು.

(೩) ಸತ್ತ ಇಲಿಗಳನ್ನು ಕೈಯಿಂದ ಮುಟ್ಟದೆ ಕಟ್ಟಿಗೆ ಅಥವಾ ಚಿಮುಟಿಗೆಯಿಂದ ಹಿಡಿದು ಹೊರಗೆ ಒಯ್ಯಬೇಕು.

(೪) ಬಲೆಗಳನ್ನಿಟ್ಟು ಇಲಿಗಳನ್ನು ಹಿಡಿದು ನಾಶಮಾಡಬೇಕು.

(೫) ವಾಸಸ್ಥಳದ ಒಳಗೆ ಮತ್ತು ಸುತ್ತಲೂ ಹೊರಬದಿಯಲ್ಲಿ 'ಡಿ.ಡಿ.ಟಿ.' ಅಥವಾ 'ಗೆಮೆಕ್ಸೇನ್' ಎಂಬ ಕ್ರಿಮಿನಾಶಕ ಔಷಧಿಯನ್ನು ಸಿಂಪಡಿಸಬೇಕು. ಇಲಿಗಳ ಹೋರುಗಳಲ್ಲಿ ಗಂಧಕದ ಹೊಗೆಯನ್ನು ಹಾಕಬೇಕು. ಇಲ್ಲವೆ **"ಸಿಯಾನೊ"** ಎಂಬ ವಾಯುವನ್ನು ಹೊಡಿಸಬೇಕು.

(೬) ಮನೆಯಲ್ಲಿ ಚಿಕ್ಕಾಡುಗಳಾಗದಂತೆ ನೋಡಿಕೊಳ್ಳಬೇಕು. ಎದರೆ ಧೂಳಿ-ಕಸಕಡ್ಡಿಗಳಲ್ಲಿ ಚಿಕ್ಕಾಡುಗಳು ಹೆಚ್ಚಾಗಿರುವದರಿಂದ, ಅವು ಉಳಿಯದಂತೆ ಮನೆಯನ್ನು ಸ್ವಚ್ಛ ಮಾಡುತ್ತಿರಬೇಕು; ಮತ್ತು ಆಗಾಗ ನೆಲವನ್ನು ಫಿನಾಯಿಲ್ ಕೂಡಿಸಿದ ಸಗಣಿಯಿಂದ ಸಾರಿಸುತ್ತಿರಬೇಕು.

(೭) ಮನೆಯಲ್ಲಿ ಇಲಿಗಳು ಬೀಳಹತ್ತಿದರೆ, ಒಂದೆರಡು ತಿಂಗಳಾದರೂ ಆ ಮನೆಯನ್ನು ಬಿಟ್ಟುಬಿಡಬೇಕು. ಊರ ಹೊರಗೆ ವಾಸಿಸಬೇಕು. ರೋಗದ ಹಾವಳಿಯು ಕಡಮೆಯಾದ ಮೇಲೆ, ಮನೆಗೆ ಸುಣ್ಣಹಚ್ಚಿ ಸಾರಿಸಿ ಅನಂತರ ಅಲ್ಲಿ ವಾಸಿಸಬೇಕು.

(೮) ಪ್ಲೇಗಿನ ಬೇನೆಯನ್ನು ಪ್ರತಿಬಂಧಿಸುವ ಚುಚ್ಚುಮದ್ದನ್ನು ಚುಚ್ಚಿಸಿಕೊಳ್ಳಬೇಕು.

ಈ ಬೇನೆಯಲ್ಲಿ ಗಂಟು-ಏಳುವ ಪ್ಲೇಗು, ಗಂಟು-ಏಳದ ಪ್ಲೇಗು ಎಂದು ಎರಡು ಪ್ರಕಾರಗಳುಂಟು. ಗಂಟು ಏಳದೆ ಬರುವ ಪ್ಲೇಗು ಬಹಳ ಉಗ್ರಸ್ವರೂಪದ್ದಿದ್ದು, ೨೪ ಗಂಟೆಗಳಲ್ಲಿ ನಿಶ್ಚಿತವಾಗಿ ಮರಣವನ್ನೇ ತರುವದು.

### ಅಭ್ಯಸನಗಳು

೧. ಪ್ಲೇಗುಗಳಲ್ಲಿ ಪ್ರಕಾರಗಳಾವವು ? ಅವುಗಳಲ್ಲಿ ಯಾವದು ಭಯಂಕರವಾದದ್ದು ?

೨. ಈ ರೋಗವನ್ನು ಹಬ್ಬಿಸುವ ಮಧ್ಯಸ್ಥಗಾರರು ಯಾರು ? ಹೇಗೆ ?

೩. ಹೋರಿನೊಳಗಿರುವ ಇಲಿಗಳನ್ನು ನಾಶಪಡಿಸುವ ಬಗೆ ಯಾವುದು

೪. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. ಮನೆಯಲ್ಲಿ........ಸಾಯಹತ್ತಿದರೆ........
ಮುಟ್ಟಿಗಾದರೂ ಆ........ಬಿಡಬೇಕು.

ಬ. ಈ ಬೇನೆಯು........ಪಟ್ಟಣದಲ್ಲಿ ತುಂಬ....

## ೫. ವಿಷಮಜ್ವರ

ಅಶುದ್ಧ ನೀರು–ಹಾಲುಗಳ ಮೂಲಕ ಈ ರೋಗವು ಹಬ್ಬುತ್ತದೆ; ಇದರ ರೋಗಜಂತುಗಳು ಶರೀರವನ್ನು ಪ್ರವೇಶಿಸಿದ ಮೇಲೆ ೧೦–೧೫ ದಿನಗಳನಂತರ ರೋಗದ ಲಕ್ಷಣಗಳು ಕಾಣಹತ್ತುವವು. ಪ್ರಾಯದ ಜನರು ಇದಕ್ಕೆ ತುತ್ತಾಗುವದು ಬಹಳ. ಇದರ ಸೂಕ್ಷ್ಮ ಜಂತುಗಳು ರೋಗದಿಂದ ಬಳಲುತ್ತಿರುವ ಮತ್ತು ರೋಗದಿಂದ ಗುಣಹೊಂದುತ್ತಿರುವ ಮನುಷ್ಯನ ಮಲ–ಮೂತ್ರಗಳಿಂದ ಹೊರಗೆ ಬರುವವು. ಅವು ಅನೇಕ ಕಾರಣಗಳಿಂದ ನೀರಲ್ಲಿ ಸೇರುವವು. ಇಂತಹ ನೀರಿನಿಂದ ಪಾತ್ರೆಗಳನ್ನು ತೊಳೆದರೆ ಆ ಪಾತ್ರೆಯಲ್ಲಿರಿಸಿದ ಹಾಲು, ಅನ್ನ ಮುಂತಾದ ಆಹಾರಪದಾರ್ಥಗಳು ದೂಷಿತವಾಗುವವು. ಅವುಗಳನ್ನು ಸೇವಿಸುವದರಿಂದ ಈ ರೋಗವು ಬರುವದು. ಇದಲ್ಲದೆ ಮನೆಯೊಳಗಿನ ನೊಣಗಳೂ ಈ ರೋಗಜಂತುಗಳನ್ನು ಎಲ್ಲ ಕಡೆಗೆ ಹರಡುವವು.

**ಲಕ್ಷಣಗಳು:—** ತಲೆಶೂಲಿ ಆರಂಭವಾಗಿ ಜ್ವರ ಬರಹತ್ತುವದು. ಜ್ವರವು ೧೦೫ ಅಂಶಗಳ ವರೆಗೂ ಏರುವದುಂಟು. ಬಂದ ಜ್ವರವು ಬಹಳ ದಿನಗಳ ವರೆಗೆ ಇಳಿಯುವದಿಲ್ಲ. ಈ ರೋಗದಿಂದ ಸಣ್ಣಕರುಳಿನ ಒಳಭಾಗದಲ್ಲಿ ಹುಣ್ಣುಗಳಾಗುವವು. ರೋಗಿಯ ಶುಶ್ರೂಷೆಯು ಚೆನ್ನಾಗಿ ಆಗದಿದ್ದರೆ, ಆ ಕರುಳಿಗೆ ತೂತುಗಳು ಬಿದ್ದು ಅವನು ಮರಣಹೊಂದುವನು.

**ಪ್ರತಿಬಂಧಕ ಉಪಾಯುಗಳು:–** (೧) ಅನ್ನ, ನೀರು, ಹಾಲು ಮುಂತಾದ ಆಹಾರಪದಾರ್ಥಗಳ ಬಗೆಗೆ ಜಾಗರೂಕರಾಗಿರಬೇಕು. ಹಾಲು–ನೀರುಗಳನ್ನು ಚೆನ್ನಾಗಿ ಕುದಿಸಿ, ಆರಿಸಿ ಕುಡಿಯಬೇಕು. (೨) ರೋಗ ಪ್ರತಿಬಂಧಕ ಔಷಧವನ್ನು ಚುಚ್ಚಿಸಿಕೊಳ್ಳಬೇಕು. (೩) ಆರಯಿಕೆ ಮಾಡುವವರು ರೋಗಿಯ ಮಲಮೂತ್ರ, ಉಗುಳು ಮುಂತಾದವುಗಳನ್ನು ಜಂತುನಾಶಕದ್ರವ್ಯಗಳಿಂದ ದೋಷರಹಿತವಾಗುವಂತೆ ಮಾಡಿ, ದೂರ ತೆಗೆದುಕೊಂಡು ಹೋಗಿ ಹೂತು ಬಿಡಬೇಕು ಅಥವಾ ಸುಟ್ಟುಬಿಡಬೇಕು.

**ಉಪಚಾರ:—** ಡಾಕ್ಟರರ ಅನುಮತಿಯಂತೆ ಔಷಧ ಕೊಡಿಸಬೇಕು. ಈ ರೋಗದಲ್ಲಿ ಆರಯಿಕೆಯು ಚೆನ್ನಾಗಿ ಆದರೆ ರೋಗಿಯು ಬೇಗನೆ ಗುಣಹೊಂದುವನು.

**ಅ:**

೧. ವಿಷಮಜ್ವರವು ಹೇಗೆ ಪ್ರಸಾರವಾಗುವದು ?

೨. ಈ ರೋಗವು ಬರದಂತೆ ಯಾವ ಉಪಾಯಗಳನ್ನು ಮಾಡುವಿರಿ ?

೩. ಬಿಟ್ಟ ಶಬ್ದಗಳನ್ನು ತುಂಬಿರಿ.

(ಅ) ವಿಷಮಜ್ವರದಿಂದ........ನಲ್ಲಿ........ಗಳಾಗುವವು.

(ಬ) ........ಗಳನ್ನು ಕುದಿಸಿ ಆರಿಸಿ ಕುಡಿಯಬೇಕು.

## ೬. ಕ್ಷಯ

ಭಾರತದಲ್ಲಿ ಇತ್ತೀಚಿಗೆ ಕ್ಷಯರೋಗದಿಂದ ಬಳಲುವವರ ಸಂಖ್ಯೆಯು ದಿನದಿನಕ್ಕೆ ಹೆಚ್ಚಾಗಹತ್ತಿದೆ. ಈ ಬೇನೆಬಂದ ಮನುಷ್ಯನು ಒಮ್ಮೆಲೆ ಸಾಯುವದಿಲ್ಲ. ಅವನ ಶರೀರವು ಕ್ರಮೇಣ ಕ್ಷೀಣವಾಗುತ್ತ ಕಡೆಗೆ ಮರಣಕ್ಕೆ ತುತ್ತಾಗುವದು. ಮನುಷ್ಯನಿಗೆ ಈ ಬೇನೆಯು ಸೇರಿಕೊಂಡದ್ದು ಉಳಿದ ಬೇನೆಗಳಂತೆ



ಆಕೃತಿ ೧೫. ಕ್ಷಯರೋಗಿಯ ಉಪಚಾರ

ತೀವ್ರ ಗೊತ್ತಾಗುವದಿಲ್ಲ. ಆದ್ದರಿಂದ ಸಕಾಲಕ್ಕೆ ತಕ್ಕ ಔಷಧೋಪಚಾರವನ್ನು ಮಾಡಲು ಸಹ ಅನುವಾಗುವದಿಲ್ಲ. ಈ ಬೇನೆಯು ಇನ್ನೂ ಪ್ರಾರಂಭಾವಸ್ಥೆಯಲ್ಲಿ ಇದ್ದಾಗಲೇ ತಕ್ಕ ಉಪಚಾರ ನಡಿಸಿದರೆ ಗುಣವಾಗುವದು.

**ಲಕ್ಷಣಗಳು:—** (೧) ಶಕ್ತಿಯು ಕ್ಷೀಣವಾಗುವದು. ಮುಖವು ನಿಸ್ತೇಜವಾಗುವದು. ಶರೀರದ ತೂಕವು ಕಡಮೆಯಾಗುತ್ತ ಹೋಗುವದು.

(೨) ಸೌಮ್ಯ ಉಪಾಯಗಳಿಂದ ಕಡಮೆಯಾಗದಂತಹ ಕೆಮ್ಮು ಹತ್ತಿ ಕಫವು ಬೀಳಹತ್ತುವದು. ಕಫದ ಸಂಗಡ ಒಮ್ಮೊಮ್ಮೆ ರಕ್ತವೂ ಇರುವದು.

(೩) ಪ್ರತಿದಿನ ಸಾಯಂಕಾಲಕ್ಕೆ ಮೈಯಲ್ಲಿ ಜ್ವರಬರುವದು.

(೪) ರಾತ್ರಿಯಲ್ಲಿ ಮೈ ಬೆವರುವದು.

**ಪ್ರಸಾರ:**— ಕ್ಷಯರೋಗಿಯು ಉಗುಳಿನೊಡನೆ ರೋಗಜಂತುಗಳು ಹೊರಗೆ ಬಂದು, ಸುತ್ತಲಿನ ಹವೆಯಲ್ಲಿರುವ ಧೂಳೀಕಣಗಳ ಮೇಲೆ ಕುಳಿತು ಕೊಳ್ಳುವವು. ಇಂಥ ಧೂಳಿಯ ಕಣಗಳುಳ್ಳ ಹವೆಯನ್ನು ನಿರೋಗಿಯು ಉಸಿರಾಡಿಸಿದರೆ ಶ್ವಾಸದ ಕೂಡ ರೋಗಜಂತುಗಳು ಅವನ ಶರೀರದಲ್ಲಿ ಪ್ರವೇಶಿಸುವವು. ಆದರಿಂದ ಅವನಿಗೂ ಆ ಬೇನೆಯು ಬರುವದು.

ಕ್ಷಯರೋಗಿಯು ಕೆಮ್ಮುವಾಗಲೂ ಅವನ ಜೊಲ್ಲು-ಕಫಗಳ ಸಂಗಡಲೂ ರೋಗಜಂತುಗಳು ಹೊರಗೆ ಬಂದು ಹವೆಯಲ್ಲಿ ಸೇರಿಕೊಳ್ಳುವವು. ಮೇಲೆ ಹೇಳಿದಂತೆ ಇಂತಹ ದೂಷಿತ ಹವೆಯನ್ನು ಉಸಿರಾಡಿಸುವ ನಿರೋಗಿಗೂ ಈ ರೋಗವು ಅಂಟಿಕೊಳ್ಳುವದು.

ಕ್ಷಯರೋಗಿಯು ಉಪಯೋಗಿಸುವ ಪಾತ್ರೆ, ಅರಿವೆ ಮುಂತಾದವುಗಳನ್ನು ಬೇರೆಯವರು ಉಪಯೋಗಿಸಿದರೆ ಅವುಗಳಿಗೆ ಅಂಟಿಕೊಂಡ ರೋಗಜಂತುಗಳು ಆ ನಿರೋಗಿಯ ಶರೀರದಲ್ಲಿ ಸೇರಿಕೊಂಡು ಅವನಿಗೂ ರೋಗವನ್ನುಂಟು-ಮಾಡುವವು.

ಕ್ಷಯರೋಗವುಳ್ಳ ಎಮ್ಮೆ-ಆಕಳುಗಳ ಹಾಲನ್ನು ಸೇವಿಸುವದರಿಂದಲೂ ಈ ಬೇನೆಯು ಬರುವದುಂಟು.

**ಪ್ರತಿಬಂಧಕ ಉಪಾಯಗಳು:**— (೧) ಪ್ರತಿಯೊಬ್ಬರೂ ಶುದ್ಧವಾದ ಹವೆಯು ದೊರೆಯುವಂತಹ ಸ್ಥಳಗಳಲ್ಲಿ ವಾಸಿಸಬೇಕು.

(೨) ಶುದ್ಧ ಹಾಗೂ ಸತ್ತ್ವವುಳ್ಳ ಆಹಾರವನ್ನು ತಕ್ಕೊಳ್ಳುತ್ತಿರಬೇಕು.

(೩) ಒಂದೆಡೆಗೆ ಹೆಚ್ಚು ಜನದಟ್ಟಣೆಯಾಗದಂತೆ ನೋಡಿಕೊಳ್ಳಬೇಕು.

(೪) ಕಂಡಕಂಡಲ್ಲಿ ಉಗುಳಬಾರದು.

(೫) ಕ್ಷಯರೋಗಿಗಳೊಡನೆ ಸಂಪರ್ಕಮಾಡಬಾರದು.

(೬) ರೋಗಿಯು ಕೆಮ್ಮುವಾಗ ಬಾಯಿಗೆ ವಸ್ತ್ರವನ್ನು ಹಿಡಿದು ಕೆಮ್ಮಬೇಕು. ಆ ವಸ್ತ್ರವನ್ನು ನೀರಲ್ಲಿ ಕುದಿಸಿ ಒಗೆದು ಸ್ವಚ್ಛಮಾಡುತ್ತಿರಬೇಕು.

(೭) ರೋಗಿಯ ಕಫ ಮುಂತಾದುದನ್ನು ತೀಕ್ಷ್ಣವಾದ ಕ್ರಿಮಿನಾಶಕ ದ್ರವ್ಯಗಳೊಂದಿಗೆ ಸೇರಿಸಿ ಮಣ್ಣಲ್ಲಿ ಮುಚ್ಚಬೇಕು.

ಕ್ಷಯರೋಗವೆಂದರೆ ಕ್ಷೀಣತೆ (ಸವಕಳಿ)ಯಿಂದ ಉಂಟಾಗುವ ರೋಗ; ಶರೀರದಲ್ಲಿ ಎಲುಬುಗಳಾಗಲಿ, ಫುಪ್ಫುಸಗಳಾಗಲಿ, ರಕ್ತ ಇಲ್ಲವೆ ಕರುಳುಗಳಾಗಲಿ ಕ್ಷೀಣತೆಯನ್ನು ಹೊಂದಬಹುದು. ಹೀಗೆ ಶರೀರದ ಬೇರೆ

ಬೇರೆ ಅವಯವಗಳು ಕ್ಷೀಣತೆಯನ್ನು ಹೊಂದುವದಕ್ಕೆ ಬೇರೆ ಬೇರೆ ಪ್ರಕಾರದ ಕ್ಷಯರೋಗಗಳು ಕಾರಣವಾಗಿರುವವು.

### ಅಭ್ಯಾಸನಗಳು

೧. ಕ್ಷಯರೋಗವುಳ್ಳ ಮನುಷ್ಯನ ಲಕ್ಷಣಗಳಾವವು ?

೨. ಈ ರೋಗವು ರೋಗಿಯಿಂದ ಹೇಗೆ ಪ್ರಸಾರವಾಗುವದು ?

೩. ಬೇನೆಗೆ ಈ ಹೆಸರು ಬರಲು ಕಾರಣವೇನು ?

೪. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. ........ಹಾಲನ್ನು ಸೇವಿಸುವದರಿಂದ........ಬರುವದು.

ಬ. ........ಬಾಯಿಗೆ........ಹಿಡಿದು ಕೆಮ್ಮಬೇಕು.

## ೭. ಚಳಿಜ್ವರ

ಭಾರತದಲ್ಲಿ ಪ್ರತಿವರುಷ ಲಕ್ಷಾವಧಿ ಜನರು ಚಳಿಜ್ವರದಿಂದ ಬಳಲುತ್ತಿರುವರು. ಈ ಬೇನೆಯು ಗುಂಗಾಡುಗಳಿಂದ ಪ್ರಸಾರವಾಗುವದು. ಇವುಗಳಲ್ಲಿ ಕ್ಯುಲೆಕ್ಸ್ (ಸಾದಾ) ಗುಂಗಾಡು, ಎನಾಫೆಲಿಸ್ (ಚಳಿಜ್ವರದ ಗುಂಗಾಡು) ಎಂದು ಎರಡು ಪ್ರಕಾರಗಳಿರುವವು. ಇವುಗಳಲ್ಲಿ ಚಳಿಜ್ವರವು ಎನಾಫೆಲಿಸ್ ಗುಂಗಾಡುಗಳಿಂದಲೇ ಪ್ರಸಾರವಾಗುವದು.

ಇವು, ಒಂದೆಡೆಗೇ ನೀರು ನಿಂತು ಕೊಳಚೆಯಾಗುವಲ್ಲಿ ಹೆಚ್ಚಾಗಿ ಹುಟ್ಟುವವು. ಮಲೆನಾಡುಗಳಲ್ಲಿ ಇಂತಹ ಕೊಳಚೆಗಳು ವಿಶೇಷವಾಗಿರುವದರಿಂದ ಅಲ್ಲಿ ಈ ರೋಗದ ಉಪದ್ರವವು ಹೆಚ್ಚಾಗಿ ಕಂಡುಬರುವದು.

**ಬೇನೆಯ ಲಕ್ಷಣಗಳು:—** (೧) ಮೊದಲು ಅಂಗಾಲು ತಣ್ಣಗಾಗುವದು. (೨) ಮೈಯಲ್ಲಿ ನಡುಕುಹುಟ್ಟುವದು. (೩) ಮೈ ಬಿಸಿಯಾಗುತ್ತ ಜ್ವರ ಏರುವದು. (೪) ಬೆವರುಬಂದು ಜ್ವರ ಇಳಿಯುವದು.

**ಪ್ರಸಾರ:—** ಎನಾಫೆಲಿಸ್ ಗುಂಗಾಡು ಮನುಷ್ಯರ ರಕ್ತವನ್ನು ಕುಡಿದು ಜೀವಿಸುವದು. ಗುಂಗಾಡು ಚಳಿಜ್ವರದಿಂದ ಬಳಲುವ ಮನುಷ್ಯನ ರಕ್ತವನ್ನು ಹೀರಿಕೊಳ್ಳುವಾಗ, ಆ ರೋಗಿಯ ರಕ್ತದಲ್ಲಿರುವ ರೋಗ-ಜಂತುಗಳು ಗುಂಗಾಡಿನ ಹೊಟ್ಟೆಯಲ್ಲಿ ಸೇರುವವು; ಮತ್ತು ಅಲ್ಲಿಯೇ ಬೆಳೆವಣಿಗೆ ಹೊಂದುವವು. ಅವುಗಳಿಂದ ಈ ಗುಂಗಾಡಿಗೆ ಏನೂ ಅಪಾಯವಾಗುವದಿಲ್ಲ. ಈ ಗುಂಗಾಡು ನಿರೋಗಿಮನುಷ್ಯನ ರಕ್ತವನ್ನು ಹೀರಿಕೊಳ್ಳುವಾಗ, ರಕ್ತವು ಹೊರಗೆ ಬಂದಕೂಡಲೆ ಗಟ್ಟಿಯಾಗಬಾರದೆಂದು

ಅದು ತನ್ನ ಜೊಲ್ಲನ್ನು ಸುರಿಸುವದು. ಜೊಲ್ಲಿನೊಡನೆ ಹೊರಬಿದ್ದ ಚಳಿಜ್ವರದ ರೋಗಜಂತುಗಳು ಆವನ ಶರೀರವಲ್ಲಿ ಪ್ರವೇಶಿಸುವವು. ಅವು ಅಲ್ಲಿಯೇ ಬೆಳೆವಣಿಗೆ ಹೊಂದುತ್ತ ಒಂದೆರಡು ವಾರಗಳಲ್ಲಿ ರೋಗವನ್ನು ಉಂಟುಮಾಡುವವು. ಹೀಗೆ ಈ ರೋಗವು ರೋಗಿಯಿಂದ ನಿರೋಗಿಗೆ ಎನಾಫೆಲಿಸ್ ಗುಂಗಾಡುಗಳ ಮುಖಾಂತರ ಪ್ರಸಾರವಾಗುವದು. ಇವು ಹಗಲು ಮನುಷ್ಯರನ್ನು ಕಚ್ಚುವದಿಲ್ಲ. ಸಂಜೆಯಾಗುತ್ತಲೇ ಅವುಗಳ ಹಾವಳಿಯು ಪ್ರಾರಂಭವಾಗುವದು.




ಆಕೃತಿ ೧೬. ಚಳಿಜ್ವರದ ಹಬ್ಬುಗೆ

**ಪ್ರತಿಬಂಧಕ ಉಪಾಯಗಳು:–** (೧) ಮನೆಯ ಸುತ್ತುಮುತ್ತ ನೀರು ನಿಂತು ಕೊಳಚೆಯಾಗದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಕೊಳಚೆ ಇದ್ದರೆ ಅದರ ಮೇಲೆ ವಾರಕ್ಕೆ ಎರಡು ಸಲ ಚಿಮಣಿಎಣ್ಣೆಯನ್ನು ಹಾಕಬೇಕು. ಎಣ್ಣೆಯು ನೀರಮೇಲೆ ಹರಡಿಕೊಳ್ಳುವದರಿಂದ ನೀರಲ್ಲಿದ್ದ ಗುಂಗಾಡುಗಳು ಉಸಿರುಗಟ್ಟಿ ಸಾಯುವವು. ಚಿಮಣಿಎಣ್ಣೆಯ ಕೂಡ ಸಾಬಾಣವನ್ನು ಬೆರೆಸುವದು ಒಳ್ಳೆಯದು.

(೨) ಮಳೆಗಾಲದಲ್ಲಿ ೧೫ ದಿನಕ್ಕೊಮ್ಮೆ ತುಸು ತುಸು ಕ್ವಿನಾಯಿನ್ ಸೇವಿಸುತ್ತಿರಬೇಕು. ಮನೆಯ ನೆಲವನ್ನು ಫಿನಾಯಿಲ್ ಕೂಡಿದ ಶಗಣಿಯಿಂದ ಸಾರಿಸುತ್ತಿರಬೇಕು. ಮನೆಯ ಗೋಡೆ, ಒಳಮಾಳಿಗೆ ಮುಂತಾದ ಎಲ್ಲ ಭಾಗಗಳನ್ನು 'ಡಿ. ಡಿ. ಟಿ.' ದ್ರವ್ಯದಿಂದ ಹೊಡೆಯಬೇಕು.

ಚಳಿಜ್ವರದಲ್ಲಿ ಪ್ರತಿದಿನ ಬರುವ ಜ್ವರ, ದಿನಬಿಟ್ಟು ದಿನ ಬರುವ ಜ್ವರ, ನಾಲ್ಕುದಿನಕ್ಕೊಮ್ಮೆ ಬರುವ ಜ್ವರ ಹೀಗೆ ಬೇರೆ ಬೇರೆ ಪ್ರಕಾರಗಳುಂಟು.

### ಅಭ್ಯಸನಗಳು

೧. ಚಳಿಜ್ವರದ ಲಕ್ಷಣಗಳಾವವು ?

೨. ಎನಾಫೆಲಿಸ್ ಗುಂಗಾಡು ಈ ಬೇನೆಯನ್ನು ಹೇಗೆ ಹಬ್ಬಿಸುತ್ತದೆ ?

೩. ಗುಂಗಾಡುಗಳನ್ನು ನಾಶಮಾಡುವ ಉಪಾಯಗಳೇನು ?

೪. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

ಅ. ಶರೀರದಲ್ಲಿ ಸೇರಿದ............ನಾಶ ಮಾಡಲು............ಔಷಧವನ್ನು ಕೊಡಬೇಕು.

ಬ. ಮಲೆನಾಡುಗಳಲ್ಲಿ............ಈ ರೋಗದ............ಬಹಳವಾಗಿ ಕಂಡು ಬರುವದು.

---

## ೮. ನಾರುಹುಣ್ಣು

ಕಾಲರಾ, ಪ್ಲೇಗು ಮುಂತಾದ ರೋಗಗಳಂತೆ ಈ ನಾರುಹುಣ್ಣಿನ ಬೇನೆಯಿಂದ ಮನುಷ್ಯನು ಸಾಯುವದಿಲ್ಲ; ಆದರೆ ಅವನ ಆರೋಗ್ಯವು ಮಾತ್ರ ಕೆಡುವದು. ಈ ಬೇನೆಯು ಸಾಮಾನ್ಯವಾಗಿ ಹೊಕ್ಕುತುಂಬುವ ಬಾವಿ-ಕೆರೆ-ಹೊಂಡಗಳ ನೀರನ್ನು ಕುಡಿಯಲು ಉಪಯೋಗಿಸುವ ಹಳ್ಳಿಗಳಲ್ಲಿ ಮಾತ್ರ ಹೆಚ್ಚಾಗಿ ಕಂಡುಬರುವದು. ಇದು ಹೆಚ್ಚಾಗಿ ಬೇಸಗೆಯ ಕಾಲದಲ್ಲಿ ಬರುತ್ತದೆ.




ಆಕೃತಿ ೧೭. ನಾರುಹುಣ್ಣಿನ ಹಬ್ಬುಗೆ

**ಲಕ್ಷಣಗಳು:**— (೧) ಮನುಷ್ಯನಿಗೆ ಪಿತ್ತದ ವಿಕಾರವಾದಂತಾಗಿ ಮೈ ತುರಿಸಹತ್ತುತ್ತದೆ. ಮೈಮೇಲೆ ಗಾದರಿಗಳೇಳುವವು. ಮೈ ಉರಿಯುವದು. ಕೈ-ಕಾಲು-ಹಿಮ್ಮಡಗಳನ್ನು ಹೆಚ್ಚು ತುರಿಸಬೇಕೆನಿಸುವದು.

(೨) ತಿನಸುಬಿಟ್ಟ ಸ್ಥಳದಲ್ಲಿ ತುರಿಸಿದರೆ ಅಲ್ಲಿ ಬಿಳಿಯ ಬೊಕ್ಕೆ ಏಳುವದು.

(೩) ಬೊಕ್ಕೆಯು ಹುಣ್ಣಿನಂತಾಗಿ ಸುತ್ತಲಿನ ಭಾಗವೆಲ್ಲ ಬಾಯುವದು.

(೪) ಹುಣ್ಣಿನೊಳಗಿಂದ ಮಾರ್ಗಮಾಡಿಕೊಂಡು ದಾರದಂತಹ ಒಂದು ಜಂತುವು (ನಾರು) ಹೊರಬೀಳುವದು. ನಾರು ಪೂರ್ತಿಯಾಗಿ ಹೊರಗೆ ಬರುವಂತೆ ಅದನ್ನು ಸಾವಕಾಶವಾಗಿ ಎಳೆದು ತೆಗೆಯಬೇಕು. ಅದು ಅರ್ಧಕ್ಕೇ ಹರಿದು ಬಂದರೆ ಒಳಗೆ ಉಳಿದ ಭಾಗದೊಳಗಿನ ರಸವು ಮನುಷ್ಯನ ರಕ್ತದಲ್ಲಿ ಸೇರಿಕೊಂಡು ಬೇರೊಂದು ಕಡೆಗೆ ಹೊಸ ಹುಣ್ಣನ್ನು ಹುಟ್ಟಿಸುವದು.



ಆಕೃತಿ ೧೮. ನಾರು ಹೊರಬರುವ ಕ್ರಮ

**ಪ್ರಸಾರ:-** ನಾರುಹುಣ್ಣಿನ ಬೇನೆಯಿಂದ ಬಳಲುವ ರೋಗಿಯು ಹೊಕ್ಕುತುಂಬುವ ಬಾವಿ, ಕೆರೆ, ಹೊಂಡ ಮುಂತಾದ ಜಲಾಶಯಗಳಲ್ಲಿ ಇಳಿಯಲು, ಅವನ ಹುಣ್ಣಿನಿಂದ ಒಂದು ತರದ ರಸವು ಹೊರಬೀಳುವದು. ಈ ರಸದೊಡನೆ ಅಸಂಖ್ಯ ಜಂತುಗಳೂ ಹೊರಬೀಳುವವು. (ಹುಣ್ಣಿಗೆ ತಣ್ಣೀರು ತಗುಲಿದೊಡನೆಯೇ ಅದರಿಂದ ರಸವು ಹೊರಗೆ ಬರುವದು.) ಹೀಗೆ ರಸದ ಕೂಡ ಹೊರಬಿದ್ದ ರೋಗಜಂತುಗಳು ಆ ಜಲಾಶಯದ ನೀರಲ್ಲಿ ಹರಡಿಕೊಳ್ಳುವವು. ಇವುಗಳನ್ನು ನೀರಲ್ಲಿದ್ದ 'ಸಾಯಕ್ಲಾಫ್' ಎಂಬ ಕ್ರಿಮಿಗಳು ತಿನ್ನುವವು. ಇಂತಹ ಸಾಯ-ಕ್ಲಾಫುಗಳುಳ್ಳ ನೀರನ್ನು ಬೇರೆ ನಿರೋಗಿ ಜನರು ಕುಡಿಯಲು ಅವು ಅವರ ಮೈಯಲ್ಲಿ ಸೇರಿ ಅಲ್ಲಿಯೇ ಸತ್ತುಹೋಗುವವು. ಆದರೆ ಸಾಯಕ್ಲಾಫುಗಳ ಹೊಟ್ಟೆಯಲ್ಲಿದ್ದ ನಾರುಜಂತುಗಳು ಸಾಯದೆ, ಬೆಳೆವಣಿಗೆ ಹೊಂದಿ ಆ ಮನುಷ್ಯನಿಗೆ ಬೇನೆಯನ್ನುಂಟುಮಾಡುವವು. ಈ ಪ್ರಕಾರ ನೀರಿನ ಮುಖಾಂತರವಾಗಿ ಈ ಬೇನೆಯು ಪ್ರಸಾರಹೊಂದುವದು.

**ಪ್ರತಿಬಂಧಕ ಉಪಾಯಗಳು:—** (೧) ಹೊಕ್ಕುತುಂಬುವ ಜಲಾಶಯಗಳಲ್ಲಿ ನಾರುಹುಣ್ಣಿನ ರೋಗವುಳ್ಳ ಮನುಷ್ಯನನ್ನು ಇಳಿಯಗೊಡಬಾರದು.

(೨) ಜಲಾಶಯಗಳಲ್ಲಿ ನಾರುಹುಣ್ಣಿನ ಜಂತುಗಳು ಉಂಟಾಗಿರುವವೆಂದು ಸಂಶಯ ಬಂದರೆ ಆ ನೀರಿನಲ್ಲಿ 'ಬ್ಲೀಚಿಂಗ ಪಾವಡರ್' ಎಂಬ ಪುಡಿಯನ್ನು ಹಾಕಬೇಕು.

(೩) ಕುಡಿಯಲು ಕಾಯಿಸಿ ಸೋಸಿದ ನೀರನ್ನು ಉಪಯೋಗಿಸಬೇಕು.

(೪) ಸಾಧ್ಯವಿದ್ದ ಮಟ್ಟಿಗೂ ಹೊಕ್ಕು ತುಂಬುವ ಜಲಾಶಯಗಳನ್ನು ಸೇದುವ ಬಾವಿಗಳಂತೆ ಪರಿವರ್ತಿಸಿಕೊಳ್ಳಬೇಕು. ಜನರು ಒಳಗೆ ಇಳಿಯಲು ಅವಕಾಶವನ್ನು ಕೊಡಬಾರದು.

## ಅಭ್ಯಸನಗಳು

೧. 'ಸಾಯಕ್ಲಾಪ್' ಎಂದರೇನು? ಅವುಗಳಿಂದ ನಾರುಬೇನೆಯು ಹೇಗೆ ಹಬ್ಬುವದು?

೨. ಆ ಬೇನೆಯು ಬರುವ ಪೂರ್ವದ ಸೂಚನೆಗಳು ಯಾವವು?

೩. ನಾರನ್ನು ಸುತ್ತುವಾಗ ಹರಿಯಬಾರದು ಏಕೆ?

೪. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

(ಅ) ..........ಜಲಾಶಯಗಳಲ್ಲಿ..............ಮನುಷ್ಯನನ್ನು ಇಳಿಯಗೊಡಬಾರದು.

(ಬ) ಸಾಯಕ್ಲಾಪುಗಳುಳ್ಳ.............. ಮುಖಾಂತರವಾಗಿ ಪ್ರಸಾರಹೊಂದುವದು.






ಮುದ್ರಕರು: ಶ್ರೀ. ಎಮ್. ಜಿ. ಪಾಳೇಕರ, ವಸಂತ ಮುದ್ರಣಾಲಯ, ಧಾರವಾಡ